ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)

**೧೦ನೆಯ ಸಂಚಿಕೆ**

**ದಶಮ ಶತಕ**

**(ಸವ್ಯಾಖ್ಯಾನ)**


ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1931.

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0.

ಈ ಸಂಚಿಕೆಯ ಬೆಲೆ
12 ಆಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ದಶಮಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

ಶ್ರೀಮಾನ್ ಜಯತಿ ಕಲ್ಕೀನ್ದ್ರಃ ಶ್ರೀ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ದಶಮಶತಕದಲ್ಲಿ—ಪ್ರಥಮದಶಕ.

(ತಾಳತಾಮರೈ.—)

(ಈ ದಶಕದಲ್ಲಿ—ಕೈಙ್ಕರ್ಯಕ್ಕೆ ಪ್ರತಿಬನ್ಧಕವು ನಿವಾರಣಮಾಡಲ್ಪಡುತ್ತದೆ. ಇದು ತಿರುಮೋಹೂರ್ ಎಂಬ ದಿವ್ಯದೇಶದ ವಿಷಯದಲ್ಲಿ ರಚಿತವಾದುದು.)

---

(೧) ತಾಳತಾಮರೈ ತ್ತಡಮಣಿವಯಲ್ ತಿರುಮೋಹೂರ್,
ನಾಳುಮೇವಿನನ್ಗಮರ್ನ್ದು ನಿನ್ಱಸುರರೈತ್ತಕರ್ಕ್ಕುಮ್,
ತೋಳುನಾನ್ಗುಡೈ ಚ್ಚುರಿಕುೞಲ್ ಕಮಲಕ್ಕಣ್ ಕನಿವಾಯ್,
ಕಾಳಮೇಹತ್ತೈಯನ್ಱಿ ಮತ್ತೊನ್ಱಿಲಮ್ ಕದಿಯೇ.

ಪ್ರ॥ ತಾಳತಾಮರೈ - ಒಳ್ಳೇತಾಳುಗಳುಳ್ಳ ತಾವರೆಗಳೊಡನೆ ಕೂಡಿದ, ತಡಮ್ - ತಟಾಕಗಳನ್ನು, ಅಣಿ -- ಅಲಂಕರಿಸುವ, ವಯಲ್ - ಕ್ಷೇತ್ರಗಳುಳ್ಳ, ತಿರುಮೋಹೂರ್-ಶ್ರೀ ಮೋಹಪುರಿಯಲ್ಲಿ, ನಾಳುಮ್ ಮೇವಿ-ನಿತ್ಯವೂ ವಾಸಮಾಡಿ,

ನನ್ನು–ಚೆನ್ನಾಗಿ, ಅಮರ್‌ನ್ದು ನಿನ್ನು–ಹೊಂದಿಕೊಂಡು ನಿಂತು, ಅಶುರರೈ–ರಾಕ್ಷಸರನ್ನು, ತಕರ್‌ಕ್ಕುಮ್–ನಾಶಪಡಿಸುವ, ನಾನ್ಗುತೋಳುಡೈ–ಚತುರ್ಭುಜಗಳುಳ್ಳ, ಶುರಿಕುೞಲ್–ನಿಬಿಡಕೇಶಗಳುಳ್ಳ, ಕಮಲಕ್ಕಣ್–ಕಮಲನೇತ್ರನಾದ, ಕನಿವಾಯ್–ಬಿಂಬಾಧರವುಳ್ಳ, ಕಾಳಮೇಕತ್ತೈ ಅನ್ಱಿ–ಕಾಳಮೇಘಸ್ವರೂಪನಾದ ಸ್ವಾಮಿಯನ್ನು ಹೊರತು, ಮಱ್ಱು ಒನ್ಱು – ಬೇರೆ ಒಂದೂ, ಕದಿ ಇಲಮೇ – ನಮಗೆ ಗತಿಯೇ ಇಲ್ಲವಷ್ಟೆ !

( ಸ–ಗಾ–ರ || )—

ಅಮ್ಭೋಜಾವಳಿಭಿಸ್ತಟಾಕಸರಣಿರ್ವ್ಯಾಪ್ತಾಪ್ರಸ್ತಿ ಸಮುದ್ಭಾಸಿತಾ
ಕ್ಷೇತ್ರೇಷ್ವತ್ರ ಸದಾಽಪಿ ವಾಸರಸಿಕಃ ಶ್ರೀಮೋಹಪುರ್ಯಾಂ ಹರಿಃ |
ರಕ್ಷೋನಾಶಕರಶ್ಚತುರ್ಭುಜಧರೋ ಬಿಮ್ಬಾಧರಃ ಪದ್ಮದೃಕ್
ನೀಲಾಮ್ಭೋದನಿಭಸ್ಸ ಏವ ಶರಣಂ ರಮ್ಯಾಲಕೋ ! ನೇತರಃ ||

ತಾ|| ರಮ್ಯವಾದ ಸಸ್ಯಕ್ಷೇತ್ರಗಳಿಂದ ಪರಿವೃತವಾದ ಶ್ರೀ ಮೋಹಪುರಿಯಲ್ಲಿ ನಿಂತು ರಾಕ್ಷಸ ಧ್ವಂಸಕನಾಗಿರುವ ಚತುರ್ಭುಜನಾದ ರಮ್ಯಕೇಶನಾದ ಪದ್ಮನೇತ್ರನಾದ ಬಿಂಬಾಧರನಾದ ಕಾಳಮೇಘಸ್ವರೂಪನನ್ನು ಬಿಟ್ಟರೆ ಇನ್ನು ಯಾರೂ ನಮಗೆ ಗತಿಯಿಲ್ಲವಷ್ಟೆ !

(೨) ಇಲಙ್ಗದಿ ಮಱ್ಱೊನ್ಱೆತ್ತಕ್ಕುಮ್ ಈನ್ತಣ್ತುೞಾಯಿನ್,
ಅಲಙ್ಗಲಙ್ಕಣ್ಣಿ ಯಾಯಿರಮ್‌ಪೇರುಡೈ ಯಮ್ಮಾನ್,
ನಲಙ್ಕೊಳ್ ನಾನ್ಮಱೈವಾಣರ್‌ಕಳ್‌ವಾೞ್ ತಿರುಮೋಕೂರ್,
ನಲಙ್ಕೞಲವನಡಿನಿೞಲ್ ತಡಮನ್ಱಿಯಾಮೇ.

ಪ್ರ|| ಈನ್–ಪುಷ್ಪಗುಚ್ಛಗಳನ್ನು ಉತ್ಪಾದಿಸುವ, ತಣ್‌ತುೞಾಯಿನ್ – ಶೀತಳವಾದ ತುಳಸಿಯುಳ್ಳ, ಅಲಙ್ಗಲ್ – ಜೋಲಾಡುತ್ತಿರುವ, ಅಮ್ – ರಮ್ಯವಾದ, ಕಣ್ಣಿ–ಮಾಲೆಗಳುಳ್ಳ, ಆಯಿರಮ್‌ಪೇರುಡೈ – ಸಹಸ್ರನಾಮಗಳುಳ್ಳ, ಅಮ್ಮಾನ್ – ಸ್ವಾಮಿಯು, ನಲಮ್‌ಕೊಳ್ – ಶ್ಲಾಘ್ಯವಾದ, ನಾನ್ಮಱೈವಾಣರ್‌ಕಳ್ – ನಾಲ್ಕು ವೇದಗಳನ್ನು ಬಲ್ಲ ಬ್ರಾಹ್ಮಣರು, ವಾೞ್ – ವಾಸಮಾಡುವ, ತಿರುಮೋಕೂರ್ – ಶ್ರೀಮೋಹಪುರಿಯ ನಾಥನಾದ, ನಲಮ್ ಕೞಲವನ್ – ರಮಣೀಯವಾದ ಕಾಲು

ಗೊಲುಸುಗಳುಳ್ಳ ಸ್ವಾಮಿಯು, ಅಡಿನಿೞಲ್ – ಪಾದಚ್ಛಾಯೆಯೆಂಬ, ತಡಮನ್ಱಿ- ತಟಾಕವಲ್ಲದೆ, ಯಾಮ್-ನಾವು, ಎಮ್ಮೆೞ್ಮೈಕ್ಕುಮ್-ಎಲ್ಲಾ ಜನ್ಮಗಳಲ್ಲೂ, ಕದಿ- ಶರಣವಾಗಿ, ಮಱ್ಱೊನ್ಱು-ಬೇರೆಯೊಂದನ್ನೂ, ಇಲಮ್-ಪಡೆದವರಲ್ಲ.

( ಸ-ಗಾ-ರ || )—

ದಿವ್ಯಶ್ರೀತುಳಸೀಸುಮಾವಳಿಧರಸ್ಸಾಹಸ್ರನಾಮ್ನಾಂ ಪ್ರಭು-
ರ್ವಾಗ್ಭಿರ್ವೇದಚತುಷ್ಟಯಪ್ರವಚನೈರ್ವಿಪ್ರೋತ್ತಮೈರನ್ವಿತೇ |
ಶ್ರೀಮನ್ಮೋಹಪುರೇ ಚಕಾಸ್ತಿ ಹಿ ಹರಿಸ್ತಸ್ಯೈವ ಪಾದಾಮ್ಬುಜ-
ಚ್ಛಾಯಾರೂಪ-ಮಹಾತಟಾಕಸಲಿಲೇ ಮಗ್ನಾ ವಯಂ ಸರ್ವದಾ ||

ತಾ|| ರಮ್ಯತುಲಸೀಮಾಲಾಧರನಾದ ಸಹಸ್ರನಾಮಗಳುಳ್ಳ ಸ್ವಾಮಿಯಾಗಿಯೂ, ಚತುರ್ವೇದ ವಿತ್ತಮರಾದ ಬ್ರಾಹ್ಮಣರು ವಾಸಮಾಡುವ ಶ್ರೀಮೋಹಪುರಿಯ ನಾಥನಾಗಿಯೂ ಇರುವ ಶ್ರೀ ಪರಮಾತ್ಮನ ದಿವ್ಯ ಭೂಷಣಾಲಂಕೃತವಾದ ಪಾದಗಳ ಚ್ಛಾಯೆಯೆಂಬ ವಿಶಾಲವಾದ ತಟಾಕವನ್ನು ಹೊರತು ನಮಗೆ ಶರಣ್ಯವಾದುದು ಯಾವ ಜನ್ಮದಲ್ಲೂ ಬೇರೆ ಒಂದು ವಸ್ತುವೂ ಇಲ್ಲವಷ್ಟೆ!

(೩) ಅನ್ಱಿಯಾನೊರುಪುಕಲಿಡಮಿಲಮೆನ್ಱೆನ್ಱಲಱ್ಱಿ,
ನಿನ್ಱು ನಾನ್ಮುಕನರನೊಡು ತೇವರ್ಕಳ್ ನಾಡ,
ವೆನ್ಱಿಮೂವುಲಕಳಿತ್ತುೞಲ್ವಾಯ್ ತಿರುಮೋಕೂರ್,
ನಿನ್ಱಮಾಮಣಿ ನಣುಕುದುಮ್ ನಮದಿಡರ್ ಕೆಡವೇ.

ಪ್ರ|| ಅನ್ಱಿ-ನಿನ್ನನ್ನು ಬಿಟ್ಟು, ಯಾಮ್-ನಾವು, ಒರುಪುಕಲಿಡಮ್ ಇಲಮ್- ಬೇರೆ ಆಶ್ರಯವಿಲ್ಲದವರು, ಎನ್ಱು ಎನ್ಱು ಅಲಱ್ಱಿ-ಎಂದು ಹೇಳಿ ಹೇಳಿ ಉದ್ಘೋಷಿಸಿ, ನಿನ್ಱು – ಸ್ಥಿರವಾಗಿ ನಿಂತು, ನಾನ್ಮುಕನ್ ಅರನೊಡು – ಚತುರ್ಮುಖ ರುದ್ರರೊಡನೆ, ತೇವರ್ಕಳ್-ದೇವತೆಗಳು, ನಾಡ – ಹುಡುಕಿ ಆಶ್ರಯಿಸಲು, ವೆನ್ಱು- ವಿರೋಧಿಗಳನ್ನು ಜಯಿಸಿ, ಇಮ್ ಮೂವುಲಕು-ಈ ತ್ರಿಲೋಕಗಳನ್ನೂ, ಅಳಿತ್ತು ಉೞಲ್ವಾಯ್-ರಕ್ಷಿಸುವ ಕಾರ್ಯವೇ ತನ್ನ ಸ್ವಭಾವವಾಗಿಯುಳ್ಳ ಸ್ವಾಮಿಯು, ತಿರುಮೋಕೂರ್-ಶ್ರೀಮೋಹಪುರಿಯನ್ನು, ನಾಮ್-ನಾವು, ನಮದು-ನಮ್ಮ, ಇಡರ್ ಕೆಡ-ಮನೋದುಃಖವು ತೀರುವಂತೆ, ಇನಿ – ಇನ್ನುಮೇಲೆ, (ರಕ್ಷಕನು ಸಿಕ್ಕಿದ ಮೇಲೆ), ನನ್ಱು-ಚೆನ್ನಾಗಿ, ನಣುಕುದುಮ್-ಆಶ್ರಯಿಸುವೆವು.

( ಸ-ಗಾ-ರ || )—

ನಾನ್ಯಂ ತ್ವಾನ್ತು ವಿನಾ ವಯಂ ಹಿ ಶರಣಂ ಪ್ರಾಪ್ತಾ ಇತಿ ಶ್ರೀಹರಿಂ
ಯಂ ದೇವಾಶ್ಚತುರಾನನೇಶ್ವರಮುಖಾಶ್ಶಂಸನ್ತಿ ಭೂಯಸ್ಸ್ವಯಮ್ ।
ತ್ರೈಲೋಕ್ಯಾಧಿಪತೇಸ್ತು ತಸ್ಯ ವಸತಿಂ ಭಕ್ತ್ಯಾ ವಯಂ ಸನ್ನತಾಃ
ಶ್ರೀಮನ್ಮೋಹಪುರೀಂ ಭಜಾಮ ಶರಣಂ ಸರ್ವಾರ್ತಿಶಾನ್ತ್ಯೈ ಸದಾ ॥

ತಾ|| "ನಾವು ನಿನ್ನನು ಬಿಟ್ಟು ಬೇರೆ ಆಶ್ರಯವೇ ಇಲ್ಲದವರು"—ಎಂದು ಹೇಳಿ ಹೇಳಿ ಉದ್ಘೋಷಿಸಿ ನಿಂತು ಬ್ರಹ್ಮರುದ್ರಾದಿ ದೇವತೆಗಳು ಬಂದು ಆಶ್ರಯಿಸಲು, ಅವರ ವಿರೋಧಿಗಳನ್ನು ಜಯಿಸಿ, ಮೂರು ಲೋಕಗಳನ್ನೂ ರಕ್ಷಿಸುವ ಕಾರ್ಯವೇ ತನ್ನ ಸ್ವಭಾವವಾಗಿಯುಳ್ಳ ಸ್ವಾಮಿಯ ಶ್ರೀಮೋಹಪುರಿಯನ್ನು ನಾವು ಮನೋದುಃಖವು ತೀರುವಂತೆ ಚೆನ್ನಾಗಿ ಆಶ್ರಯಿಸೋಣ.

(೬) ಇಡರ್ಕೆಡವೆಮ್ಮೈ ಪ್ಪೋನ್ದಳಿಯಾಯೆನ್ಱೆನ್ಱೇತ್ತಿ,
ಶುಡರ್ಕೊಳ್ ಶೋದಿಯೈತ್ತೇವರುಮ್
ಮುನಿವರುಮ್ ತೊಡರ,
ಪಡರ್ಕೊಳ್ ಪಾಮ್ಬಣೈಪ್ಪಳ್ಳಿಕೊಣ್ಡಾನ್ ತಿರುಮೋಕೂರ್,
ಇಡರ್ಕೆಡವಡಿಪರವುದುಮ್ ತೊಣ್ಡೀರ್ ವಮ್ಮಿನೇ.

ಪ್ರ|| ಇಡರ್ಕೆಡ-ದುಃಖವು ತೀರುವಂತೆ, ಪೋನ್ದು - ಬಂದು, ಎಮ್ಮೈ-ನಮ್ಮನ್ನು, ಅಳಿಯಾಯ್-ರಕ್ಷಿಸು, ಎನ್ಱು ಎನ್ಱು – ಎಂದು ಹೇಳಿ ಹೇಳಿ, ಏತ್ತಿ-ಸ್ತೋತ್ರಮಾಡಿ, ಶುಡರ್ಕೊಳ್ - ಮಹಾಪ್ರಕಾಶವುಳ್ಳ, ಶೋದಿಯೈ-ತೇಜೋರೂಪವಾದ ದಿವ್ಯಶರೀರವುಳ್ಳ ಸ್ವಾಮಿಯನ್ನು, ತೇವರುಮ್-ದೇವತೆಗಳೂ, ಮುನಿವರುಮ್-ಋಷಿಗಳೂ, ತೊಡರ – ಆಶ್ರಯಿಸುವುದಕ್ಕೆ, ಪಡರ್ಕೊಳ್-ವಿಸ್ತರಿಸಿಕೊಂಡಿರುವ, ಪಾಮ್ಬಣೈ-ಶೇಷಶಯನದಲ್ಲಿ, ಪಳ್ಳಿಕೊಣ್ಡಾನ್ – ಶಯನ ಮಾಡಿರುವವನು, ತಿರುಮೋಕೂರ್ - ಶ್ರೀ ಮೋಹಪುರಿಯಲ್ಲಿ, ಇಡರ್ಕೆಡ-ನಮ್ಮ ದುಃಖವು ತೀರುವಂತೆ, ತೊಣ್ಡೀರ್-ಭಕ್ತರಾದವರೇ !, ಅಡಿ-ಅವನ ಪಾದಗಳನ್ನು, ಪರವುದುಮ್-ನಾವು ಸ್ತೋತ್ರಮಾಡೋಣ. ವಮ್ಮಿನೇ-ಬನ್ನಿರಿ.

( ಸ–ಗಾ–ರ || )—

ದುಃಖಧ್ವಂಸಕರೋಽದ್ಯ ಪಾಲಯ ವಿಭೋ ! ಸರ್ವಾನಿಹಾಸ್ಮಾನಿತಿ
ಸ್ತುತ್ವಾ ದೇವಗಣಾಶ್ಚ ತೇ ಮುನಿಗಣಾಸ್ಸಂಶ್ರಿತ್ಯ ತೇಜಃ ಪರಮ್ |
ಧನ್ಯಾಸ್ಸನ್ತಿ ತಿ ಭಾತಿ ಶೇಷಶಯನ ಶ್ರೀಮೋಹಪುರ್ಯಾಮಸೌ
ಸ್ತೋತುಂ ತತ್ಪದಯುಗ್ಮಮಾರ್ತಿಶಮನಂ ಭಕ್ತಾಸ್ಸಮಾಗಚ್ಛತ||

ತಾ|| "ನಮ್ಮ ದುಃಖವು ತೀರುವಂತೆ ಬಂದು ನಮ್ಮನ್ನು ರಕ್ಷಿಸು''—ಎಂದು ಹೇಳಿ ಹೇಳಿ ಸ್ತೋತ್ರಮಾಡಿ ದಿವ್ಯತೇಜೋಮಯನಾದ ಸ್ವಾಮಿಯನ್ನು ದೇವತೆಗಳೂ ಋಷಿಗಳೂ ಬಂದು ಆಶ್ರಯಿಸುವುದಕ್ಕೋಸ್ಕರ ಶೇಷಶಾಯಿಯಾಗಿ ಶ್ರೀಮೋಹಪುರಿಯಲ್ಲಿ ವಾಸಮಾಡುತ್ತಿರುವ ಅವನ ಪಾದಗಳನ್ನೇ (ನಮ್ಮ ದುಃಖವು ತೀರುವಂತೆ) ನಾವು ಸ್ತೋತ್ರಮಾಡೋಣ—ಭಕ್ತರೇ ! ಬನ್ನಿರಿ.

(೫) ತೊಣ್ಡೀರ್‌ವಮ್ಮಿನ್ನಮರ್‌ ಶುಡರೊಳಿಯೊರು
ತನಿಮುದಲ್ವನ್,
ಅಣ್ಡಮೂವುಲಕಳನ್ದವನಣಿ ತಿರುಮೋಕೂರ್‌,
ಎಣ್ತಿಶೈಯುಮೀರ್ಙ್ ಕರುಮ್ಬೊಡು ಪೆರುಮ್‌ಶೆನ್ನೆಲ್
ವಿಳೈಯ,
ಕೊಣ್ಡುಕೋಯಿಲೈ ವಲಂ ಶೆಯ್‌ದಿಙ್ಗಾಡುದುಮ್‌
ಕೂತ್ತೇ.

ಪ್ರ|| ನಮ್‌–ನಮಗೆ ಅನುಭಾವ್ಯವಾದ, ಶುಡರೊಳಿ – ಪ್ರಕಾಶಮಾನವಾದ ತೇಜೋಮಯ ದಿವ್ಯಶರೀರವುಳ್ಳ, ಒರುತನಿಮುದಲ್ವನ್–ಅದ್ವಿತೀಯನಾದ ಒಂದು ಆದಿಕಾರಣಭೂತನಾದ, ಅಣ್ಡ–ಅಣ್ಡಾನ್ತರ್ವರ್ತಿಯಾದ, ಮೂವುಲಕು–ಮೂರು ಲೋಕಗಳನ್ನೂ, ಅಳನ್ದವನ್–ಅಳೆದವನಾದ ಸ್ವಾಮಿಯ, ಅಣಿ–ಅಲಂಕಾರಭೂತವಾದ, ತಿರುಮೋಕೂರ್ – ಶ್ರೀ ಮೋಹಪುರಿಯಲ್ಲಿ, ಎಣ್‌ತಿಶೈಯುಮ್ – ಎಂಟು ದಿಕ್ಕುಗಳಲ್ಲೂ, ಈರ್–ಭೋಗ್ಯವಾದ (ಮಧುರವಾದ), ಕರುಮ್ಬೊಡು–ಕಬ್ಬಿನೊಡನೆ, ಪೆರುಮ್‌ಶೆನ್ನೆಲ್–ದೊಡ್ಡ ಕೆಂಪುಬತ್ತವು, ವಿಳೈಯ- ಬೆಳೆಯುವಂತೆ, ಕೊಣ್ಡು–ವ್ಯಾಪಿಸಿ ಇರುವ, ಕೋಯಿಲೈ – ದಿವ್ಯದೇಶವನ್ನು, ಇಙ್ಗು – ಈ ಭೂಮಿಯಲ್ಲಿ, ವಲಮ್‌ಶೆಯ್‌ದು–ಪ್ರದಕ್ಷಿಣಮಾಡಿ, ಕೂತ್ತು ಆಡುದುಮೇ – (ಸನೆ ಶ್ಲೋಷದಿಂದ) ನರ್ತನಮಾಡೋಣ, ತೊಣ್ಡೀರ್–ಭಕ್ತರೇ ! ವಮ್ಮಿ–ಬನ್ನಿರಿ.

( ಸ–ಗಾ–ರ ॥ )—

ಅಸ್ಮಾಕಂ ಪರಮಂ ಮಹಕ್ತ ಜಗತಾಂ ಮೂಲಂ ಪರಂ ಪಾದತ-
ಸ್ತ್ವರ್ಣಾಸ್ತ್ರಾಸ್ತ್ರಲೋಕಮಾನಚತುರಶ್ರೀಮೋಹಪುರ್ಯಾಂ ಹರಿಃ ।
ಭಾತ್ಯೇವಾಷ್ಟದಿಶಾಸು ಚೇಕ್ಷುಮಧುರವ್ರೀಹ್ಯಾದಿಸಸ್ಯಾವೃತಂ
ದೇವಾಗಾರಮಿಮಂ ಪರೀತ್ಯ ವಿನತಾ ನೃತ್ಯಾಮ ಚಾಗಚ್ಛತ ॥

ತಾ॥ ದಿವ್ಯತೇಜೋಮಯನಾಗಿಯೂ ಆದಿಕಾರಣಭೂತನಾಗಿಯೂ ತ್ರೈಲೋಕ್ಯವನ್ನು ಆಳಿದವನಾಗಿಯೂ ಇರುವ ಸ್ವಾಮಿಯು ವಾಸಮಾಡುವ ಶ್ರೀಮೋಹಪುರಿಯಲ್ಲಿ ಇಕ್ಷುವ್ರೀಹಿಕ್ಷೇತ್ರಾದಿಪರಿವೃತವಾದ ದಿವ್ಯದೇಶವನ್ನು ನಾವು ಪ್ರದಕ್ಷಿಣಮಾಡಿ ಸಂತೋಷದಿಂದ ನರ್ತನಮಾಡೋಣ—ಭಕ್ತರೇ! ಬನ್ನಿರಿ.

(೭) ಕೂತ್ತನ್ ಕೋವಲನ್ ಕುದಱ್ಱುವಲ್ಲಶುರರ್ಕಳ್
ಕೂಱ್ಱಮ್,
ಏತ್ತುಮ್ ನಙ್ಗಳ್ಕ್ಕುಮಮರರ್ಕ್ಕುಮ್
ಮುನಿವರ್ಕ್ಕುಮಿನ್ಬನ್-
ವಾಯ್ತ್ತ ತಣ್ಪಣೈ ವಳವಯಲ್ಶೂழ் ತಿರುಮೋಕೂರ್
ಆತ್ತನ್, ತಾಮರೈಯಡಿಯನ್ಱಿ ಮಱ್ಱಿಲಮರಣೇ.

ಪ್ರ॥ ಕೂತ್ತನ್ – ಮನೋಹಾರಿಚೇಷ್ಟಿತಗಳುಳ್ಳ, ಕೋವಲನ್–ಗೋಪಾಲಕನಾದ, ಕುದಱ್ಱು–ದರ್ಪವಿಶಿಷ್ಟರಾಗಿ, ವಲ್ ಅಶುರರ್ಕಳ್–ಬಲಿಷ್ಠರಾದ ರಾಕ್ಷಸರಿಗೆ, ಕೂಱ್ಱಮ್–ಮೃತ್ಯುವಾದ, ಏತ್ತುಮ್–ಸ್ತೋತ್ರಮಾಡುವ, ನಙ್ಗಳ್ಕ್ಕುಮ್–ನಮಗೂ, ಅಮರರ್ಕ್ಕುಮ್ – ನಿತ್ಯಸೂರಿಗಳಿಗೂ, ಮುನಿವರ್ಕ್ಕುಮ್–ಋಷಿಗಳಿಗೂ, ಇನ್ಬನ್–ಪ್ರಿಯತಮನಾದ, ವಾಯ್ತ್ತ–ರಮ್ಯವಾದ, ತಣ್ಪಣೈ–ಶೀತಳವಾದ ನೀರುಪ್ರದೇಶಗಳುಳ್ಳ, ವಳವಯಲ್–ಉದಾರವಾದ ಸಸ್ಯಕ್ಷೇತ್ರಗಳಿಂದ, ಶೂழ்- ಪರಿವೃತವಾದ, ತಿರುಮೋಕೂರ್–ಶ್ರೀ ಮೋಹಪುರಿಯಲ್ಲಿರುವ, ಆತ್ತನ್–ಆಶ್ರಯಣೀಯನಾದ ಆಪ್ತನ, ತಾಮರೈ ಅಡಿ ಅನ್ಱಿ–ತಾವರೆಯಂತೆ ಇರುವ ಪಾದಗಳನ್ನು ಹೊರತು, ಮಱ್ಱು ಅರಣ್–ಬೇರೆ ರಕ್ಷಕವಸ್ತುವನ್ನು, ಇಲಮ್–ನಾವು ಪಡೆದಿಲ್ಲ.

( ಸ-ಗಾ-ರ ॥ )—

ಮಾಯಾಚೇಷ್ಟಿತ ಏವ ಗೋಪತಿಲಕೋ ದುಷ್ಟಾಸುರಧ್ವಂಸಕ-
ಸ್ಸೂರೀಣಾಮಪಿ ಮೌನಿನಾಂ ಚ ಸುಲಭಸ್ಸೋsತ್ರಾನ್ವಿತಾನಾಂ ಚ ನಃ।
ಮಾಧುರ್ಯಾಮೃತವಾರಿಧಿಸ್ಸುರುಚಿಂಕ್ಷೇತ್ರಾವೃತೇ ಭಾತ್ಯಸೌ
ಶ್ರೀಮನ್ಮೋಹಪುರೇ ಕಿಲಾಸ್ಯ ಚರಣದ್ವಂದ್ವಂ ಶರಣ್ಯಂ ಹಿ ನಃ॥

ತಾ॥ ಮನೋಹಾರಿಚೇಷ್ಟಿತಗಳುಳ್ಳ ಗೋಪಾಲಕನಾಗಿಯೂ, ದುಷ್ಟರಾಕ್ಷಸ ನಾಶಕನಾಗಿಯೂ, ನಮಗೂ ನಿತ್ಯಸೂರಿಗಳಿಗೂ ಋಷಿಗಳಿಗೂ ಪ್ರಿಯತಮ ನಾಗಿಯೂ, ರಮ್ಯಶೀತಳಕ್ಷೇತ್ರಪರಿವೃತವಾದ ಶ್ರೀಮೋಹಪುರಿಯಲ್ಲಿ ಆಶ್ರಯ ಣೀಯನಾಗಿರುವ ಆಪ್ತನಾಗಿಯೂ—ಇರುವ ಸ್ವಾಮಿಯ ಪಾದಾರವಿಂದಗಳನ್ನು ಹೊರತು ಇನ್ನು ಯಾವುದೂ ನಮಗೆ ಶರಣ್ಯವಾದ ವಸ್ತುವು ಇಲ್ಲವೇ ಇಲ್ಲ.

(೭) ಮಱ್ಱಿಲಮರಣ್‌ವಾನ್‌ ಪೆರುಮ್‌ಪಾೞ್‌ ತನಿಮುದಲಾ,
ಶುಱ್ಱುನೀರ್‌ಪಡೈತ್ತದನ್‌ವೞಿತೊಲ್‌ ಮುನಿಮುದಲಾ,
ಮುಱ್ಱುಮ್‌ ತೇವರೋಡುಲಕುಶೆಯ್‌ವಾನ್‌
ತಿರುಮೋಕೂರ್‌,
ಶುಱ್ಱಿನಾಮ್‌ ವಲಂಶೆಯ್ಯ ನಮ್‌ತುಯರ್‌ಕೆಡುಮ್‌
ಕಡಿದೇ.

ಪ್ರ॥ ತನಿಮುದಲಾ - ಅದ್ವಿತೀಯವಾದ ಆದಿಕಾರಣವಸ್ತುವಾದ, ವಾನ್ - ದಿವ್ಯವಾದ, ಪೆರುಮ್-ವಿಸ್ತೀರ್ಣವಾದ, ಪಾೞ್‌ಮುದಲ್ ಆ-ಪ್ರಕೃತಿಮೊದಲಾದ, ಶುಱ್ಱು - ಸುತ್ತಲೂ ಹರಡಿಕೊಂಡಿರುವ, ನೀರ್ ಕಾರಣಜಲವನ್ನು, ಪಡೈತ್ತು - ಸೃಷ್ಟಿಸಿ, ಅದನ್‌ವೞಿ-ಆ ಮಾರ್ಗದಲ್ಲಿ, ತೊಲ್-ಅನಾದಿಯಾದ, ಮುನಿಮುದಲಾ- ಬ್ರಹ್ಮನೇ ಮೊದಲಾದ, ಮುಱ್ಱುಮ್ ತೇವರೋಡು-ಎಲ್ಲಾ ದೇವತೆಗಳೊಡನೆ ಕೂಡಿದ, ಮುಱ್ಱುಮ್ ಉಲಕುಶೆಯ್‌ವಾನ್-ಸಕಲ ಲೋಕಗಳನ್ನೂ ಸೃಷ್ಟಿಮಾಡು ವವನ, ತಿರುಮೋಕೂರ್-ಶ್ರೀಮೋಹಪುರಿಯನ್ನು, ಶುಱ್ಱಿನಾಮ್‌ವಲಮ್‌ಶೆಯ್ಯ- ಸುತ್ತಿ ನಾವು ಪ್ರದಕ್ಷಿಣಮಾಡಲು, ನಮ್ ತುಯರ್-ನಮ್ಮ ದುಃಖವು, ಕಡಿದೇ – ಶೀಘ್ರವಾಗಿಯೇ, ಕೆಡುಮ್ – ನಷ್ಟವಾಗುವುದು. (ಆದುದರಿಂದ) ಮಱ್ಱು- ಅವನನ್ನು (ಅದನ್ನು) ಬಿಟ್ಟು ಬೇರೆ, ಅರಣ್ – ರಕ್ಷಕ ವಸ್ತುವನ್ನು, ಇಲಮ್- ನಾವು ಪಡೆದವರಲ್ಲ.

( ಸ-ಗಾ-ರ )—

ಲೋಕಾನಾಮಾದ್ಯಮೂಲಪ್ರಕೃತಿಪರಿಸರತ್ಕಾರಣಾಮ್ಭಃಪ್ರಸೃಷ್ಟೇಃ
ಪಶ್ಚಾತ್ತಂ ಚಾಬ್ಜಯೋನಿಂ ಮುನಿಮಪಿ ಚ ಸುರಾನ್ ಸರ್ವಲೋಕಾಂಶ್ಚ
ಸೃಷ್ಟ್ವಾ ।
ಸೋಽಯಂ ಶ್ರೀಮೋಹಪುರ್ಯಾಂ ವಿಲಸತಿ ಹಿ ಹರಿಸ್ತತ್ಪುರಂ ಚೇತ್ಪರೀತ್ಯ
ಸ್ವೈರಂ ಯಾಮೋಽಸ್ಮದಾರ್ತಿಸ್ಸಪದಿ ಪರಿಹೃತಾ ಸ್ಯಾಚ್ಛರಣ್ಯಂ ನ
ಚಾನ್ಯತ್ ॥

ತಾ॥ ಆದಿಕಾರಣವಸ್ತುವಾದ ಮೂಲಪ್ರಕೃತಿ ಮೊದಲಾಗಿ ಕಾರಣ ಜಲವನ್ನೂ ಸೃಷ್ಟಿಸಿ, ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳೊಡನೆ ಕೂಡಿದ ಸಕಲ ಲೋಕಗಳನ್ನೂ ಸೃಷ್ಟಿಮಾಡಿದ ಸ್ವಾಮಿಯ ತಿರುಮೋಹೂರನ್ನು ನಾವು ಸುತ್ತಿ ಪ್ರದಕ್ಷಿಣಮಾಡಿದರೆ ನಮ್ಮ ದುಃಖವೆಲ್ಲಾ ಶಾನ್ತವಾಗುವುದು. ಆದುದರಿಂದ ಅವನನ್ನು (ಅದನ್ನು) ಬಿಟ್ಟು ಬೇರೆ ನಮಗೆ ಶರಣ್ಯವಸ್ತುವೇ ಇಲ್ಲ.

(೮) ತುಯರ್‌ಕೆಡುಮ್ ಕಡಿದಡೈನ್ದು ವನ್ದಡಿಯವರ್
ತೊೞುಮಿನ್,
ಉಯರ್‌ಕೊಳ್ ಶೋಲೈಯೊಣ್‌ತಡಮಣಿಯೊಳಿ
ತಿರುಮೋಕೂರ್,
ಪೆಯರ್‌ಕಳಾಯಿರಮುಡೈಯ ವಲ್ಲರಕ್ಕರ್ ಪುಕ್ಕೞುನ್ದ,
ತಯರದಱ್ಪೆಱ್ಱ ಮರತಕಮಣಿ ತ್ತಡತ್ತಿನೈಯೇ.

ಪ್ರ॥ ಉಯರ್‌ಕೊಳ್ – ಉನ್ನತವಾದ, ಶೋಲೈ – ವೃಕ್ಷಸಮೂಹಗಳುಳ್ಳ, ಒಣ್‌ತಡಮ್–ರಮ್ಯವಾದ ತಟಾಕಗಳುಳ್ಳ, ಅಣಿಯೊಳಿ–ಅಲಂಕಾರವಾದ ಪ್ರಕಾಶವುಳ್ಳ, ತಿರುಮೋಕೂರ್ – ಶ್ರೀಮೋಹಪುರಿಯಲ್ಲಿ, ಆಯಿರಮ್ ಪೆಯರ್‌ಕಳ್ ಉಡೈಯ–ಸಹಸ್ರನಾಮಧೇಯಗಳುಳ್ಳ, ವಲ್ ಅರಕ್ಕರ್–ಪ್ರಬಲವಾದ ರಾಕ್ಷಸರು, ಪುಕ್ಕು ಅೞುನ್ದ – (ಯುದ್ಧದಲ್ಲಿ) ಪ್ರವೇಶಿಸಿ ನಷ್ಟವಾಗುವಂತೆ, ತಯರದಱ್ಪೆಱ್ಱ– ದಶರಥನು ಪಡೆದ, ಮರತಕಮಣಿ–ಪಚ್ಚೆಮಣಿಯಂತೆ ವರ್ಣವುಳ್ಳ, ತಡತ್ತಿನೈ– ತಟಾಕದಂತೆ ವಿಶಾಲವಾಗಿ ಆಶ್ರಯಭೂತನಾದ ಸ್ವಾಮಿಯನ್ನೇ, ಅಡಿಯವರ್ – ಭಕ್ತರಾದನೀವುಗಳು, ವನ್ದು ಅಡೈನ್ದು – ಬಂದು ಆಶ್ರಯಿಸಿ, ತೊೞುಮಿನ್–ಸೇವಿಸಿರಿ. ತುಯರ್ – (ನಿಮ್ಮ) ದುಃಖವು, ಕಡಿದು – ಶೀಘ್ರನಾಗಿ, ಕೆಡುಮ್ – ನಷ್ಟವಾಗುವುದು.

( ಸ-ಗಾ-ರ ॥ )—

ಉದ್ಯದ್ವೃಕ್ಷೈಸ್ತಟಾಕೈರಪಿ ಚ ಬಹುವಿಧೈರ್ಭೂಷಿತಾಯಾಂ ಚಕಾಸ್ತಿ
ಶ್ರೀವಿಷ್ಣೋರ್ಮೋಹಪುರ್ಯಾಂ ದಶರಥತನಯೋ ದಿವ್ಯರತ್ನಪ್ರಭೋऽಸೌ ।
ಯಸ್ಮಿನ್ನಮ್ಭೋಧಿರೂಪೇ ನಿಶಿಚರನಿವಹಾ ಹನ್ತ! ನಷ್ಟಾಸ್ಸಹಸ್ರೈ-
ರ್ನಾಮ್ನಾಂ ಕ್ರೂರಾಶಯಾಸ್ತಂ ಭಜತ ಭುವಿ ಜನಾ ಭಕ್ತಿತೋ
ದುಃಖಶಾನ್ತ್ಯೈ ॥

ತಾ॥ ಉನ್ನತ ವೃಕ್ಷಸಮೂಹಗಳಿಂದಲೂ ರಮ್ಯ ತಟಾಕಗಳಿಂದಲೂ ಕೂಡಿ ಅಲಂಕಾರವಾದ ಪ್ರಕಾಶವುಳ್ಳ ಶ್ರೀಮೋಹಪುರಿಯಲ್ಲಿ ಸಹಸ್ರನಾಮಧೇಯಗಳುಳ್ಳ ರಾಕ್ಷಸಧ್ವಂಸಕನಾದ ದಶರಥಕುಮಾರನಾದ ಮರಕತವರ್ಣನಾದ ಸ್ವಾಮಿಯನ್ನೇ ಭಕ್ತರಾದ ನೀವು ಬಂದು ಆಶ್ರಯಿಸಿ ಸೇವಿಸಿರಿ. ನಿಮ್ಮ ದುಃಖವೆಲ್ಲಾ ಶೀಘ್ರವಾಗಿ ನಷ್ಟವಾಗುವುದು.

(೯) ಮಣಿತ್ತಡತ್ತಡಿಮಲರ್ಕ್ಕಣ್‌ಕಳ್ ಪವಳಚ್ಚೆವ್ವಾಯ್,
ಅಣಿಕೊಳ್ ನಾಲ್‌ತಡನ್ದೋಳ್
ತೆಯ್‌ವಮಶುರರ್ಯೈ ಎನ್ನುಮ್,
ತುಣಿಕ್ಕುಮ್ ವಲ್ಲರಟ್ಟನುಱೈ ಪೊೞಿಲ್ ತಿರುಮೋಕೂರ್,
ನಣಿತ್ತು ನಮ್ಮುಡೈ ನಲ್ಲರಣ್ ನಾಮಡೈನ್ದನಮೇ.

ಪ್ರ॥ ಮಣಿತ್ತಡತ್ತು-ನಿರ್ಮಲವಾದ ತಟಾಕದಂತೆ ಶೀತಳವಾದ, ಅಡಿ-ಪಾದಗಳನ್ನೂ, ಮಲರ್ ಕ್ಕಣ್‌ಕಳ್-ತಾವರೆಹೂವಿನಂತೆ ಇರುವ ಕಣ್ಣುಗಳನ್ನೂ, ಪವಳಚ್ಚೆವ್ವಾಯ್ - ಹವಳದಂತೆ ಕೆಂಪಾಗಿರುವ ಅಧರವನ್ನೂ ಉಳ್ಳವನಾಗಿ, ಅಣಿಕೊಳ್ - ರಮ್ಯತೆಯುಳ್ಳ, ತಡಮ್-ಉದ್ದವಾದ, ನಾಲ್ ತೋಳ್-ನಾಲ್ಕು ತೋಳುಗಳುಳ್ಳ, ತೆಯ್‌ವಮ್-ದಿವ್ಯರೂಪಧರನಾಗಿ, ಅಶುರರ್ಯೈ - ರಾಕ್ಷಸರನ್ನು, ಎನುಮ್-ಎಂದಿಗೂ, ತುಣಿಕ್ಕುಮ್-ಭೇದಿಸುವ, ವಲ್ ಅರಟ್ಟ-ಮಹಾ ಬಲಿಷ್ಠನಾದ ಸ್ವಾಮಿಯು, ಉಱೈ-ನಿತ್ಯವಾಸಮಾಡುವ, ಪೊೞಿಲ್-ಉದ್ಯಾನಗಳಿಂದ ಪರಿವೃತವಾದ, ತಿರುಮೋಕೂರ್ - ಶ್ರೀ ಮೋಹಪುರಿಯಲ್ಲಿ. ನಮ್ಮುಡೈ-ನಮ್ಮ, ನಲ್ ಅರಣ್-ಒಳ್ಳೇ ರಕ್ಷಕವಾದ ದಿವ್ಯದೇಶವು, ಣಣಿತ್ತು-ನಮಗೆ ಪ್ರಾಪ್ತವಾಗಿ ಸಮೀಪಿಸಿತು. ನಾಮ್ ಅಡೈನ್ದನಮ್ - ನಾವು ಇದನ್ನು ಆಶ್ರಯಿಸಿ ಕೃತಾರ್ಥರಾದೆವು.

( ಸ-ಗಾ-ರ || )—

ಅಚ್ಛಸ್ವಚ್ಛಮಹಾತಟಾಕಸದೃಶಸ್ವಾಂಘ್ರಿದ್ವಯಶ್ರೀಹರಿಃ
ಪದ್ಮಾಕ್ಷಶ್ಚ ಚತುರ್ಭುಜೋ ವಿಲಸತಿ ಜ್ಯೋತಿಃ ಪ್ರವಾಳಾಧರಃ |
ನಾನಾರಾಕ್ಷಸಕಾನನಾವಳಿಗಣಚ್ಛೇದೀ ಚ ವೀರಾಗ್ರಣೀ-
ರಸ್ಮಿನ್ ಮೋಹಪುರೇಽದ್ಯ ಭಾತಿ ಶರಣಂ ಚಾಸ್ಮಾಕಮೇತತ್ಪರಮ್ ||

ತಾ|| ಸ್ವಚ್ಛವಾದ ತಟಾಕದಂತೆ ಶೀತಳವಾದ ಪಾದಗಳನ್ನೂ, ತಾವರೆ ಹೂವಿನಂತೆ ಕಣ್ಣುಗಳನ್ನೂ, ಬಿಂಬಫಲದಂತೆ ಅಧರವನ್ನೂ ಉಳ್ಳವನಾಗಿ ಚತುರ್ಭುಜ ದಿವ್ಯರೂಪಧರನಾಗಿ ರಾಕ್ಷಸಧ್ವಂಸಕನಾದ ಮಹಾಬಲಿಷ್ಠನಾದ ಸ್ವಾಮಿಯು ನಿತ್ಯವಾಸಮಾಡುವ ರಮ್ಯೋದ್ಯಾನಪರಿವೃತವಾದ ಶ್ರೀ ಮೋಹಪುರಿಯಲ್ಲಿ ನಮಗೆ ಶರಣ್ಯವಾದ ದಿವ್ಯದೇಶವು ಲಭ್ಯವಾಗಿರುವುದರಿಂದ ನಾವು ಇದನ್ನು ಆಶ್ರಯಿಸಿ ಕೃತಾರ್ಥರಾಗಿ ಇರುತ್ತೇವೆ.

(೧೦) ನಾಮಡೈನ್ದ ನಲ್ಲರಣ್ ನಮಕ್ಕೆನ್ಱು ನಲ್ಲಮರರ್,
ತೀಮೈ ಶೆಯ್ಯುಮ್ ವಲ್ಲಶುರರೈಯಞ್ಜಿ ಚ್ಚೆನ್ಱಡೈನ್ದಾಲ್,
ಕಾಮರೂಪಮ್ ಕೊಣ್ಡೆೞುನ್ದಳಿಪ್ಪಾನ್ ತಿರುಮೋಕೂರ್,
ನಾಮಮೇ ನವಿನ್ಱೆಣ್ಣುಮಿನೇತ್ತುಮಿನ್ ನಮರ್ಕಾಳ್.

ಪ್ರ|| ನಮಕ್ಕು – ನಮಗೆ ಅಸಾಧಾರಣವಾಗಿ, ನಾಮ್ ಅಡೈನ್ದ–ನಾವು ಪಡೆದ, ನಲ್ ಅರಣ್–ಒಳ್ಳೇ ರಕ್ಷಕವಸ್ತು, ಎನ್ಱು–ಎಂದು, ನಲ್ ಅಮರರ್–ವೈಲಕ್ಷಣ್ಯವನ್ನು ತಿಳಿದ ದೇವತೆಗಳು, ತೀಮೈಶೆಯ್ಯುಮ್ – ದುಷ್ಟಕೃತ್ಯಗಳನ್ನು ಮಾಡುವ, ವಲ್ ಅಶುರರೈ–ಬಲಿಷ್ಠರಾದ ರಾಕ್ಷಸರನ್ನು ಕುರಿತು, ಅಞ್ಜಿ ಚ್ಚೆನ್ಱಡೈನ್ದಾಲ್–ಭಯದೊಡನೆ ಆಶ್ರಯಿಸಿದರೆ, ಕಾಮರೂಪಮ್‌ಕೊಣ್ಡು – ಇಷ್ಟವಾದ ರೂಪವನ್ನು ಹೊಂದಿ, ಎೞುನ್ದು–ಎದ್ದು, ಅಳಿಪ್ಪಾನ್–ರಕ್ಷಿಸುವವನು ವಾಸಮಾಡುವ, ತಿರುಮೋಕೂರ್– ಶ್ರೀಮೋಹಪುರಿಯ, ನಾಮಮೇ–ಪ್ರಸಿದ್ಧವಾದ ನಾಮಧೇಯದ ಕೀರ್ತಿಯನ್ನೇ, ನಮರ್‌ಕಾಳ್ – ನಮ್ಮ ಸಮ್ಬನ್ಧಿಗಳಾದ ನೀವುಗಳು, ನವಿನ್ಱು–ಆದರದಿಂದ, ಎಣ್ಣುಮಿನ್–ಸ್ಮರಿಸಿರಿ, ಏತ್ತುಮಿನ್–(ಮತ್ತೂ) ಸ್ತೋತ್ರಮಾಡಿರಿ.

( ಶ-ಗಾ-ರ ॥ )—

ಅಸ್ಮಾಕಂ ಶರಣಂ ಪರಂ ತದಿದಮೇವೇತಿ ಸ್ವಯಂ ಸಂಶ್ರಿತಾನ್
ಭಕ್ತಾನ್ ರಕ್ಷತಿ ಕಾಮರೂಪಭೃದಸೌ ಶ್ರೀಮೋಹಪುರ್ಯಾಂ ವಸನ್ ।
ದೇವಾನಾಮಸುರಪ್ರಣಾಶನವಿಧೌ ಕೀರ್ತಿಂ ಪರಾಂ ಭಕ್ತಿತೋ
ಯೂಯಂ ಭಕ್ತಗಣಾಸ್ಸ್ತುತ ಸ್ಮರಣತಃ ಪಶ್ಚಾತ್ ಸ್ವಯಂ ಧಾರ್ಮಿಕಾಃ॥

ತಾ॥ ಇದೇ ನಮಗೆ ಅಸಾಧಾರಣವಾದ ಶರಣ್ಯವಸ್ತುವೆಂದು ವಸ್ತುವೈಲಕ್ಷಣ್ಯವನ್ನು ತಿಳಿದ ದೇವತೆಗಳು ದುಷ್ಟಚೇಷ್ಟಿತರಾದ ರಾಕ್ಷಸರಿಗೆ ಭಯಪಟ್ಟು ಭಗವನ್ತನನ್ನೇ ಆಶ್ರಯಿಸಿದರೆ, ಇಷ್ಟವಾದ ರೂಪವನ್ನು ಧರಿಸಿಬಂದು ಅವನು ರಕ್ಷಿಸುವನು. ಅನ್ತಹ ಸ್ವಾಮಿಯು ವಾಸಮಾಡುವ ಶ್ರೀಮೋಹಪುರಿಯ ದಿವ್ಯನಾಮಧೇಯದ ಕೀರ್ತಿಯನ್ನೇ ನಮ್ಮ ಅನುಬನ್ಧಿಗಳಾದ ನೀವುಗಳು ಆದರದಿಂದ ಸ್ಮರಿಸಿ ಸ್ತುತಿಸಿರಿ.

(೧೧) ಏತ್ತುಮಿನ್ ನಮರ್'ಕಾಳ್ ತಾನ್ ಕುಡಮಾಡು
ಕೂತ್ತನೈ, ಕ್ಕುರುಕೂರ್' ಚ್ಚಡಕೋಪನ್ ಕುಱ್ಱೇವಲ್'ಕಳ್',
ವಾಯು'ತ್ತ ವಾಯಿರತ್ತುಳ್ಳಿವೈ ವಣ್' ತಿರುಮೋಕೂರ್'ಕ್ಕು,
ಈತ್ತಪತ್ತಿವೈ ಯೇತ್ತವಲ್ಲಾರ್'ಕ್ಕಿಡರ್' ಕೆಡುಮೇ.

ಪ್ರ॥ ನಮರ್'ಕಾಳ್-ನಮ್ಮ ಸಮ್ಬನ್ಧಿಗಳೇ!, ಏತ್ತುಮಿನ್-ಸ್ತುತಿಸಿರಿ, ಎನ್ರು-ಎಂದು, ತಾನ್-ತಾನು, ಕುಡಮಾಡುಕೂತ್ತನೈ-ಘಟಲೀಲಾಲೋಲನನ್ನು ಕುರಿತು, ಕುರುಕೂರ್ ಚ್ಚಡಕೋಪನ್-ಶ್ರೀ ಕುರುಕಾಪುರಿಯ ಶಠಾರಿಮುನಿಯು, ಕುಱ್ಱೇವಲ್ ಕಳ್-ಅನ್ತರಙ್ಗ ಕೈಙ್ಕರ್ಯಗಳೆಂದು, ಇವೈ-ಈ ದಿವ್ಯಸೂಕ್ತಿಗಳಿಂದ, ವಾಯ್'ತ್ತ-ರಚಿಸಿದ, ಆಯಿರತ್ತುಳ್- ಸಹಸ್ರಪದ್ಯಮಾಲೆಯೊಳು, ವಣ್'ತಿರುಮೋಕೂರ್'ಕ್ಕು-ಶ್ಲಾಘ್ಯವಾದ ಶ್ರೀಮೋಹಪುರಿಗೆ, ಈತ್ತಪತ್ತು ಇವೈ-ಸಮರ್ಪಿಸಲ್ಪಟ್ಟ ಈ ಹತ್ತು ಪದ್ಯಗಳನ್ನು, ಏತ್ತವಲ್ಲಾರ್'ಕ್ಕು - ಪ್ರೀತಿಯಿಂದ ಪಠಿಸಬಲ್ಲವರಿಗೆ, ಇಡರ್ ಕೆಡುಮೇ - ಸಕಲ ದುಃಖವೂ ನಷ್ಟವಾಗುವುದು (ವೈಕುಣ್ಠಪ್ರಾಪ್ತಿಗೆ ಪ್ರತಿಬನ್ಧಕವೆಲ್ಲಾ ನಷ್ಟವಾಗುವುದು.)

( ಸ-ಗಾ-ರ || )—

ಅಸ್ಮದ್ಬನ್ಧುಗಣಾಸ್ಸ್ತುತಿಂ ಕುರುತ ಚೇತ್ಯೇನಂ ಶಠಾರಿಃ ಪ್ರಿಯಾ-
ನಾಹೂಯಾಚ್ಯುತಮೇಷ ಶಂಸಿತುಮನಾಃ ಶ್ರೀಕುಮ್ಭಲೀಲಾಶ್ರಯಮ್ |
ಸಾಹಸ್ರೇ ಸ್ವಕನೋದಿದಂ ಚ ದಶಕಂ ಶ್ರೀಮೋಹಪುರ್ಯಾಶ್ರಯಂ
ಭಕ್ತ್ಯಾ ಯೇ ತು ಪಠನ್ತಿ ದುಃಖಮಖಿಲಂ ತೇಷಾಂ ಪ್ರಣಶ್ಯೇತ್ ಕ್ಷಣಾತ್||

ತಾ|| "ನಮ್ಮ ಅನುಬನ್ಧಿಗಳೇ! ಅವನನ್ನೇ ಸ್ತುತಿಸಿರಿ''—ಎಂದು ಘಟ ಲೀಲಾಲೋಲನಾದ ಸ್ವಾಮಿಯ ವಿಷಯದಲ್ಲಿ ಶ್ರೀಕುರುಕಾಪುರಿಯ ಶಠಾರಿಮುನಿಯು ಅನ್ತರಂಗ ವಾಚಿಕ ಕೈಙ್ಕರ್ಯವೆಂದು ರಚಿಸಿದ ಸಹಸ್ರಪದ್ಯಮಾಲೆಯೊಳು ಶ್ಲಾಘ್ಯವಾದ ಶ್ರೀಮೋಹಪುರಿಗೋಶ್ವರ ಅರ್ಪಿತವಾದ ಈ ಹತ್ತು ಪದ್ಯಗಳನ್ನು ಬಲ್ಲವರಿಗೆ ಸಕಲ ದುಃಖವೂ ಶಾನ್ತವಾಗುವುದು (ಇವರಿಗೆ ವೈಕುಣ್ಠಪ್ರಾಪ್ತಿಗೆ ಪ್ರತಿಬನ್ಧಕವೆಲ್ಲಾ ಹೋಗಿ ಸಕಲ ಶ್ರೇಯಃಪರಂಪರೆಯೂ ಉಂಟಾಗುವುದು.)

( ದ್ರ-ಉ-ಸಂ || )—

ಆದ್ಯೇಽಸ್ಮಿನ್ನಸ್ಯ ಶತಕಸ್ಯ ಮುನಿಸ್ಸ್ವಯಾತ್ರಾಂ
ನಿಶ್ಚಿತ್ಯ ವರ್ತ್ಮನಿ ಸಹಾಯಮುಪೇಕ್ಷಮಾಣಃ |
ಆಪ್ತಂ ಹಿತಜ್ಞಮಹಿತಚ್ಛಿದಮಮ್ಬುಜಾಕ್ಷಂ
ಮೋಹೂರಧೀಶಮುರವೈರಿಣಮಾಶ್ರಯತ್ಸಃ ||

( ದ್ರ-ಉ-ತಾ-ರ || )—

ದೈತ್ಯಾನಾಂ ನಾಶಕತ್ವಾದ್ವಿಧೃತತುಲಸಿಕಾಮೌಳಿಭಾವಾಞ್ಚಯಿತ್ವಾತ್
ಸರ್ವಾಧೀಶೇಶಯಿತ್ವಾನ್ನಿರವಧಿಕಪರಜ್ಯೋತಿರುಲ್ಲಾಸ್ಯಭಾವಾತ್ |
ಲೋಕಾನಾಂ ಸೃಷ್ಟ್ಯಭಾವಾದ್ದಶರಥಸುತತಾಶಾನ್ತಿಹಾರಿತ್ವಮುಖ್ಯೈ-
ರಾಕಾರೈಸ್ಸದ್ಗತಿಸ್ಸನ್ಮಞ್ಜುಲದತನುರುಚಿಶ್ಚೇತಿ ತೇನಾಭ್ಯಧಾಯಿ ||

(ಈ ಪ್ರಥಮದಶಕದ ಸಾರಾಂಶ—)

ಈ ಮೊದಲನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಕೈಙ್ಕರ್ಯ ಪ್ರತಿಬನ್ಧಕವನ್ನು ನಿವಾರಣಮಾಡುವುದಕ್ಕಾಗಿ-ತಿರುಮೋಕೂರ್—ಎಂಬ ಶ್ರೀಮೋಹಪುರಿಯ ಸ್ವಾಮಿಯನ್ನೇ ಆಶ್ರಯಿಸಿ, ಬೇರೆ ಶರಣ್ಯವಸ್ತುವೇ ಇಲ್ಲವೆಂದು ನಿಶ್ಚಯಿಸಿ, ಆ ದಿವ್ಯದೇಶವನ್ನೇ ಪ್ರದಕ್ಷಿಣಮಾಡಿ ನರ್ತನಮಾಡೋಣವೆಂದು ಭಕ್ತರನ್ನು ಕರೆದು, ದಶರಥಕುಮಾರನಾಗಿಯೂ, ಚತುರ್ಭುಜನಾಗಿಯೂ, ಕಾಮರೂಪ ಧರನಾಗಿಯೂ ಇರುವ ಆ ಮೋಹಪುರಿಯ ಸ್ವಾಮಿಯನ್ನೇ ಸ್ಮರಿಸಿ ಸ್ತುತಿಸಿರಿ—ಎಂದು ಅವರಿಗೆ ಬೋಧಿಸಿ ಇರುತ್ತಾರೆ.

—:❀:—

## ಶ್ರೀಃ

# ದಶಮಶತಕದಲ್ಲಿ—ದ್ವಿತೀಯದಶಕ.

## (ಕೆಡುಮಿಡರಾಯವೆಲ್ಲಾಮ್—)

(ಈ ದ್ವಿತೀಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಅನನ್ತಪುರ ನಗರವೆಂಬ ಅನನ್ತಶಯನದ ಸ್ವಾಮಿಯನ್ನು ಆಶ್ರಯಿಸಿ ಕೃತಾರ್ಥರಾಗಬೇಕೆಂದು ಸರ್ವರಿಗೂ ಉಪದೇಶಿಸುತ್ತಾರೆ.)

---

(೧) ಕೆಡುಮಿಡರಾಯವೆಲ್ಲಾಮ್ ಕೇಶವಾವೆನ್ನ, ನಾಳುಮ್
ಕೊಡುವಿನೈಶೆಯ್ಯುಮ್ ಕೂಱ್ಱಿನ್ ತಮರ್‍ಕಳುಮ್
ಕುಱುಕಕಿಲ್ಲಾರ್,
ವಿಡಮುಡೈಯರವಿಲ್ ಪಳ್ಳಿವಿರುಮ್ಬಿನಾನ್
ಶುರುಮ್ಬಲಱ್ಱುಮ್
ತಡಮುಡೈ ವಯಲನನ್ತಪುರನಕರ್ ಪ್ಪುಕುದುಮಿನ್ಱೇ.

ಪ್ರ॥ ಕೇಶವಾ ಎನ್ನ – ಕೇಶವ ! ಎಂದು ಕರೆಯಲು, ಇಡರ್ ಆಯ ಎಲ್ಲಾಮ್–ದುಃಖಗಳೆಲ್ಲವೂ, ಕೆಡುಮ್ – ಶಾನ್ತವಾಗುವುವು. ನಾಳುಮ್–ಪ್ರತಿ ದಿನವೂ, ಕೊಡುವಿನೈ ಶೆಯ್ಯುಮ್ – ಮಹಾ ಕ್ರೂರಕೃತ್ಯಗಳನ್ನು ಮಾಡುವ, ಕೂಱ್ಱಿನ್ ತಮರ್‍ಕಳುಮ್ – ಯಮನ ಭಟರೂ, ಕುಱುಕಕಿಲ್ಲಾರ್–ಸಮೀಪಕ್ಕೆ ಬರಲಾರರು. (ಆದುದರಿಂದ) ವಿಡಮ್ ಉಡೈ–ವಿಷವುಳ್ಳ, ಅರವಿಲ್–ಸರ್ಪವಾದ ಶೇಷನಲ್ಲಿ, ಪಳ್ಳಿವಿರುಮ್ಬಿನಾನ್–ಶಯನವನ್ನು ಅಪೇಕ್ಷಿಸಿರುವ ಸ್ವಾಮಿಯು, ಶುರುಮ್ಬು ಅಲಱ್ಱುಮ್ – ಭ್ರಮರಗಳು ಸ್ವೇಚ್ಛೆಯಿಂದ ಹಾಡುತ್ತಿರುವ, ತಡಮ್ ಉಡೈ – ಪುಷ್ಪೋದ್ಯಾನಗಳುಳ್ಳ, ವಯಲ್ – ಕ್ಷೇತ್ರಗಳಿಂದಕೂಡಿದ, ಅನನ್ತಪುರನಕರ್– ಅನನ್ತಶಯನವೆಂಬ ದಿವ್ಯದೇಶವನ್ನು, ಇನ್ಱೇ – ಈ ದಿನವೇ, ಪುಕುದುಮ್ – ಪ್ರವೇಶಿಸಿರಿ.

( ಸ–ಗಾ–ರ ॥ )—

ಶ್ರೀಮತ್ಕೇಶವನಾಮಕೀರ್ತನಕೃತಾಂ ಸರ್ವಾರ್ತಿನಾಶೋ ಭವೇತ್
ಕ್ರೂರಾ ಹಿಂಸನತತ್ಪರಾ ಯಮಭಟಾ ನೈವೋಪಸರ್ಪನ್ತಿ ತಾನ್ ।
ತಸ್ಮಾದ್ಧ್ಯೇಯಮನನ್ತಶಾಯಿಪುರಮೇವಾದ್ಯ ಸ್ವಯಂ ಪ್ರಾಪ್ನುತ
ಕ್ಷೇತ್ರೈಃ ಪುಷ್ಪವನಾನ್ವಿತೈಃ ಪರಿವೃತಂ, ಶೇತೇ ಚ ಯತ್ರಾಚ್ಯುತಃ ॥

ತಾ|| ಕೇಶವನಾಮಸಂಕೀರ್ತನದಿಂದ ಸಕಲ ದುಃಖಗಳೂ ಶಾನ್ತವಾಗುವುವು ; ಕ್ರೂರಹೃದಯರಾದ ಯಮಭಟರೂ ಸಮೀಪಕ್ಕೆ ಬರಲಾರರು. ಆದುದರಿಂದ ಭ್ರಮರ ಗಾನದಿಂದ ರಮ್ಯವಾದ ಉದ್ಯಾನಗಳಿಂದ ಕೂಡಿದ ಕ್ಷೇತ್ರಗಳುಳ್ಳ ಅನನ್ತಶಯನವೆಂಬ ದಿವ್ಯದೇಶದಲ್ಲಿ ಶೇಷಶಾಯಿಯಾದ ನಮ್ಮ ಸ್ವಾಮಿಯು ವಾಸಮಾಡುತ್ತಿರುವುದರಿಂದ ಆ ದಿವ್ಯದೇಶವನ್ನು ಈ ದಿನವೇ ಪ್ರವೇಶಿಸಿರಿ.

(೨ ಇನ್ಱುಪೋಯ್ಪ್ ಪುಗುದಿರಾಕಿಲ್ಎೞುಮೈಯುಮೇದಮ್
ಶಾರಾ,
ಕುನ್ಱುನೇರ್ಮಾಡಮಾಡೇ ಕುರುನ್ದುಶೇರ್ ಶೆರುನ್ದಿಪುನ್ನೈ,
ಮನ್ನುಲರ್ ಪೊೞಿಲನನ್ತಪುರನಗರ್ ಮಾಯನ್ನಾಮಮ್,
ಒನ್ಱುಮೋರಾಯಿರಮಾಮುಳ್ಳುವಾರ್ಕ್ಕು ಉಮ್ಬರೂರೇ.

ಪ್ರ|| ಇನ್ಱು- ಈದಿನವೇ, ಪೋಯ್-(ನೀವು) ಹೋಗಿ, ಪುಗುದಿರಾಕಿಲ್ - ಪ್ರವೇಶಿಸಿದರೆ, ಎೞುಮೈಯುಮ್ - ಸಪ್ತಜನ್ಮಗಳಲ್ಲೂ (ಯಾವಕಾಲದಲ್ಲೂ), ಏದುಮ್ ಶಾರಾ - ಸಂಸಾರಕ್ಲೇಶವು ಬರುವುದಿಲ್ಲ. ಕುನ್ಱುನೇರ್ - ಪರ್ವತಕ್ಕೆ ಸದೃಶವಾದ, ಮಾಡಮಾಡೇ-ಉಪ್ಪರಿಗೆಗಳ ಪಕ್ಕದಲ್ಲಿ, ಕುರುನ್ದುಶೇರ್-ಕುರುನ್ದು ಮರದೊಡನೆ ಸೇರಿದ, ಶೆರುನ್ದಿಪುನ್ನೈ - ಶೆರುನ್ದಿ ಮತ್ತು ಹೊನ್ನೇ ಇವುಗಳೂ, ಮನ್ನು ಅಲರ್ - ಸೇರಿಕೊಂಡು ವಿಕಸಿತವಾಗುವ, ಪೊೞಿಲ್ - ಉದ್ಯಾನಗಳುಳ್ಳ, ಅನನ್ತಪುರನಗರ್ - ಅನನ್ತಶಯನವೆಂಬ ದಿವ್ಯದೇಶದಲ್ಲಿ, ಮಾಯನ್ನಾಮಮ್ ಒನ್ಱುಮ್-ಮಾಯಾಚೇಷ್ಟಿತನಾಗಿ ವಾಸಮಾಡುವ ಸ್ವಾಮಿಯ ನಾಮಧೇಯಗಳಲ್ಲಿ ಒಂದು ಆದರೂ, ಓರಾಯಿರಮಾಮ್ - ಅದ್ವಿತೀಯವಾಗಿ ಸಹಸ್ರನಾಮಗಳಾಗಿ ಫಲಿಸುವುವು. ಉಳ್ಳುವಾರ್ಕ್ಕು - ಅನುಸನ್ಧಾನಮಾಡುವವರಿಗೆ, ಉಮ್ಬರ್ ಊರೇ-(ಆ ದಿವ್ಯದೇಶವೇ) ಪರಮಪದವಾಗುವುದು.

( ಸ-ಗಾ-ರ || )—

ಯಾಯಾ ಚೇದಘುನೈವ ತತ್ರ ತು ಗತಃ ಸ್ಸಂಸಾರದುಃಖಂ ಹತಂ
ಭೂಯಾದೇವ ಹಿ ಸಪ್ತಜನ್ಮಸು ಚ ವಃ । ಪ್ರೋದ್ಯತ್ತ್ವರುಪಾಙ್ಗನ್ನೈಃ ।
ಉದ್ಯಾನ್ತೈರ್ವಿಲಸತ್ಯನನ್ತಶಯನೇ ದಿವ್ಯೇ ಪುರೇ ಶ್ರೀಹರೇ–
ರೇಕಂ ನಾಮ ಸಹಸ್ರಮೇವ ಭವತಿ ! ಧ್ಯಾನಾತ್ಪರಂ ಸ್ಯಾತ್ಪದಮ್ ||

ತಾ॥ ಈದಿನವೇ ನೀವು ಅಲ್ಲಿ ಹೋಗಿ ಪ್ರವೇಶಿಸಿದರೆ ಸಪ್ತಜನ್ಮಗಳಲ್ಲೂ ನಿಮಗೆ ಸಂಸಾರದುಃಖವು ನಿಶ್ಶೇಷವಿನಷ್ಟವಾಗುವುದು. ಪರ್ವತದಂತೆ ಉನ್ನತವಾದ ಪ್ರಾಸಾದಗಳ ಪಕ್ಕದಲ್ಲಿ ಕುರುನ್ದು-ಶೆರುನ್ದಿ-ಹೊನ್ನೆ ಇವುಗಳೆಲ್ಲಾ ವಿಕಸಿತವಾದ ಪುಷ್ಪಗಳಿಂದ ರಮ್ಯವಾದ ಉದ್ಯಾನಗಳುಳ್ಳ ಅನನ್ತಶಯನದಲ್ಲಿ ಮಾಯಾಚೇಷ್ಟಿತನಾಗಿ ವಾಸಮಾಡುವ ಸ್ವಾಮಿಯ ನಾಮಧೇಯಗಳಲ್ಲಿ ಒಂದು ನಾಮವಾದರೂ ಸಹಸ್ರನಾಮಗಳಿಗೆ ಸಮಾನವಾದ ಫಲಗಳನ್ನು ಕೊಡುವುದು. ಈ ನಾಮಧೇಯಗಳಲ್ಲಿ ಒಂದನ್ನಾದರೂ ಅನುಸನ್ಧಾನಮಾಡುವವರಿಗೆ ಆ ದಿವ್ಯದೇಶವೇ ಪರಮಪದವಾಗುವುದು.

(೩) ಊರುಮ್ ಪುಳ್ಕೊಡಿಯುಮಃದೇ ಯುಲಕೆಲ್ಲಾ
ಮುಣ್ಡುಮಿೞ್ನ್ದಾನ್
ಶೇರುಮ್ ತಣ್ಣನನ್ತಪುರಮ್ ಶಿಕ್ಕೆನ ಪ್ಪುಕುದಿರಾಕಿಲ್,
ತೀರುಮ್ ನೋಯ್ ವಿನೈಕಳೆಲ್ಲಾಮ್ ತಿಣ್ಣ
ನಾಮಱಿಯಚ್ಚೊನ್ನೋಮ್,
ಪೇರುಮೋರಾಯಿರತ್ತುಳೊನ್ಱು ನೀರ್ ಪೇಶುಮಿನೇ.

ಪ್ರ॥ ಪುಳ್-ಗರುಡನನ್ನು, ಊರುಮ್ - ವಾಹನವಾಗಿ ನಡೆಸುತ್ತಿರುವ, ಕೊಡಿಯುಮ್ ಅಃದೇ-ಧ್ವಜವೂ ಅದೇ ಆಗಿ ಉಳ್ಳ, ಉಲಕೆಲ್ಲಾಮ್-ಸಕಲ ಲೋಕಗಳನ್ನೂ, ಉಣ್ಡು-ಭಕ್ಷಿಸಿ, ಉಮಿೞ್ನ್ದಾನ್-ಪುನರುತ್ಪತ್ತಿಮಾಡಿದ ಸ್ವಾಮಿಯು, ಶೇರುಮ್-ಬಂದು ವಾಸಮಾಡುವ, ತಣ್-ಶೀತಳವಾದ, ಅನನ್ತಪುರಮ್-ಅನನ್ತಶಯನವನ್ನು, ಶಿಕ್ಕೆನ-ಶೀಘ್ರವಾಗಿ, ಪುಕುದಿರಾಕಿಲ್-ನೀವು ಪ್ರವೇಶಿಸಿದರೆ, ನೋಯ್-ವ್ಯಾಧಿಗಳೂ, ವಿನೈಕಳೆಲ್ಲಾಮ್ - ಪಾಪಗಳೆಲ್ಲವೂ, ತೀರುಮ್-ನಾಶ ಹೊಂದುವವು. ನಾಮ್-ನಾವು, ಅಱಿಯ-(ನಿಮಗೆ) ತಿಳಿಯುವಂತೆ, ತಿಣ್ಣಮ್ ಶೊನ್ನೋಮ್-ದೃಢವಾಗಿ ಹೇಳಿದೆವು. ಪೇರುಮ್ ಓರ್ ಆಯಿರತ್ತುಳ್-(ಅವನ) ಒಂದುಸಾವಿರ ನಾಮಗಳೊಳಗೆ, ಒನ್ಱು-ಒಂದು ನಾಮವನ್ನಾದರೂ, ನೀರ್ ಪೇಶುಮಿನೇ-ನೀವು ಹೇಳಿರಿ.

( ಸ-ಗಾ-ರ ॥ )—

ಯಸ್ಯಾಸ್ತೇ ವಿನತಾಸುತಸ್ತು ಸತತಂ ದಿವ್ಯಂ ಹರೇರ್ವಾಹನಂ
ಕೇತುಶ್ಚಾಪಿ ಸ ಏವ! ಸೋಽದ್ಯ ಜಗತಾಂ ಭಕ್ಷೀ ಚ ರಕ್ಷಾಕರಃ |
ಆಸ್ತೇ ಶ್ರೀಮದನನ್ತಶಾಯಿನಗರೇ! ಕ್ಷಿಪ್ರಂ ಪ್ರವಿಶ್ಯಾತ್ರ ವಃ
ಖೇದಾನ್ನಾಶಯತ ಸ್ವಯಂ! ವದತ ತನ್ನಾಮಾಪಿ ಸಾಹಸ್ರಕೇ ||

ತಾ॥ ಗರುಡವಾಹನನಾಗಿಯೂ ಗರುಡಧ್ವಜನಾಗಿಯೂ ಸಕಲಲೋಕಗಳ ಭಕ್ಷಕನಾಗಿಯೂ ಉತ್ಪಾದಕನಾಗಿಯೂ ಇರುವ ಸ್ವಾಮಿಯು ವಾಸಮಾಡುವ ಅನನ್ತಶಯನವೆಂಬ ದಿವ್ಯದೇಶವನ್ನು ಶೀಘ್ರವಾಗಿ ನೀವು ಪ್ರವೇಶಿಸಿದರೆ, ಸಕಲ ವ್ಯಾಧಿಗಳೂ ಸರ್ವಪಾಪಗಳೂ ಶಾನ್ತವಾಗುವುವು. ಈ ರಹಸ್ಯವನ್ನು ನಾವು ನಿಮಗೆ ಚೆನ್ನಾಗಿ ತಿಳಿಯುವಂತೆ ಹೇಳಿ ಇರುತ್ತೇನೆ. ಅವನ ಸಹಸ್ರನಾಮ ಗಳೊಳಗೆ ಒಂದು ನಾಮವನ್ನಾದರೂ ನೀವು ಹೇಳಿರಿ.

(೪) ಪೇಶುಮಿನ್ ಕೂಶಮಿನ್ರಿ ಪ್ಪೆರಿಯನೀರ್ ವೇಲೈಶೂೞ್‌ನ್ದು,
ವಾಶಮೇ ಕಮೞುಮ್ ಶೋಲೈವಯಲಣಿಯನನ್ತಪುರಮ್,
ನೇಶಮ್ ಶೆಯ್‌ದುಱೈಕಿನ್ರಾನೈ ನೆಱಿಮೈಯಾಲ್ ಮಲರ್‌ಕಳ್
ತೂವಿ,
ಪೂಶನೈ ಶೆಯ್‌ಕಿನ್ರಾರ್‌ಕಳ್ ಪುಣ್ಣಿಯಮ್ ಶೆಯ್‌ದವಾಱೇ.

ಪ್ರ॥ ಪೆರಿಯನೀರ್-ಪೂರ್ಣಜಲವುಳ್ಳ, ವೇಲೈಶೂೞ್‌ನ್ದು - ಸಮುದ್ರದಿಂದ ಪರಿವೃತವಾಗಿ, ವಾಶಮೇಕಮೞುಮ್-ಪರಿಮಳಭರಿತವಾದ, ಶೋಲೈ-ಉದ್ಯಾನ ಗಳನ್ನೂ, ವಯಲ್ - ಕ್ಷೇತ್ರಗಳನ್ನೂ, ಅಣಿ- ಅಲಂಕಾರವಾಗಿ ಉಳ್ಳ, ಅನನ್ತ ಪುರಮ್-ಅನನ್ತಶಯನದಲ್ಲಿ, ನೇಶಮ್ ಶೆಯ್‌ದು-ಪ್ರೀತಿಯನ್ನು ಮಾಡಿ, ಉಱೈ ಕಿನ್ರಾನೈ-ನಿತ್ಯವಾಸಮಾಡುವವನನ್ನು, ನೆಱಿಮೈಯಾಲ್ - ಕ್ರಮವಾಗಿ, ಮಲರ್ ಕಳ್‌ತೂವಿ-ಪುಷ್ಪಗಳನ್ನು ಸಮರ್ಪಿಸಿ, ಪೂಶನೈಶೆಯ್‌ಕಿನ್ರಾರ್‌ಕಳ್ - ಆರಾಧನ ಮಾಡುವವರ, ಪುಣ್ಣಿಯಮ್-ಭಾಗ್ಯವನ್ನು, ಶೆಯ್‌ದ ಆಱೇ-(ಅವರು) ಮಾಡಿದ ರೀತಿಯನ್ನು, ಕೂಶಮಿನ್ರಿ-ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ (ಸಂಕೋಚವಿಲ್ಲದಂತೆ), ಪೇಶುಮಿನ್-ಸ್ತುತಿಸಿರಿ.

( ಸ-ಗಾ-ರ ॥ )—
ಅಮ್ಭೋಧೇಸ್ತಟತೋ ವನೈಃ ಪರಿವೃತೇ ಸೌರಭ್ಯಸಮ್ಪೂರಿತೈ-
ರ್ನಿತ್ಯಂ ಯೋ ವಿಲಸತ್ಯನನ್ತಶಯನೇ ತಂ ಪುಷ್ಪಕಸ್ವಾಸ್ಸ್ವಯಮ್ ।
ಆರಾಧ್ಯಾತ್ರ ಭವನ್ತಿ ಧನ್ಯಹೃದಯಾ ಭಕ್ತಾಸ್ತದೀಯಂ ಪರಂ
ಭಾಗ್ಯಂ ಕೀರ್ತಯತ ಸ್ವಯನ್ತು ಸತತಂ ನಿಶ್ಶಙ್ಕಮೇವಾನಘಮ್ ॥

ತಾ॥ ಸಮುದ್ರತೀರದಲ್ಲಿ ದಿವ್ಯೋದ್ಯಾನ ಸಸ್ಯಕ್ಷೇತ್ರಾದಿ ಪರಿವೃತವಾಗಿರುವ ಅನನ್ತಶಯನದಲ್ಲಿ ನಿತ್ಯ ವಾಸಮಾಡುವ ಸ್ವಾಮಿಯನ್ನು ಪುಷ್ಪಗಳಿಂದ ಆರಾಧಿಸುವ ಮಹಾತ್ಮರ ಭಾಗ್ಯವನ್ನು ನೀವು ಸಂಕೋಚವಿಲ್ಲದಂತೆ ಸಂಪೂರ್ಣವಾಗಿ ಸ್ತುತಿಸಿರಿ.

(೫) ಪುಣ್ಣಿಯಮ್ ಶೆಯ್‌ದು ನಲ್ಲ ಪುನಲೊಡು
ಮಲರ್‌ಕಳ್ ತೂವಿ,
ಎಣ್ಣುಮಿನೆನ್ದೈ ನಾಮಮಿಪ್ಪಿಱಪ್ಪಱುಕ್ಕುಮಪ್ಪಾಲ್,
ತಿಣ್ಣನಾಮಱಿಯ ಚ್ಚೊನ್ನೋಮ್
ಶೆಱಿಪೊೞಿಲನನ್ತಪುರತ್ತು,
ಅಣ್ಣಲಾರ್ ಕಮಲಪಾದಮಣುಕುವಾರಮರರಾವಾರ್.

ಪ್ರ॥ ಪುಣ್ಣಿಯಮ್ ಶೆಯ್‌ದು–ಭಕ್ತಿಯನ್ನು ಮಾಡಿ, ನಲ್ಲ–ಪರಿಶುದ್ಧವಾದ, ಪುನಲೊಡು–ತೀರ್ಥದೊಡನೆ, ಮಲರ್‌ಕಳ್–ಪುಷ್ಪಗಳನ್ನೂ, ತೂವಿ–ಸಮರ್ಪಿಸಿ, ಎನ್ದೈ – ನಮ್ಮ ತಂದೆಯಾದ ಸ್ವಾಮಿಯ, ನಾಮಮ್ – ನಾಮಧೇಯಗಳನ್ನು, ಎಣ್ಣುಮಿನ್ – ಸ್ಮರಿಸಿರಿ. (ಇದೇ) ಇಪ್ಪಿಱಪ್ಪು–ಈ ಜನ್ಮಸಮ್ಬನ್ಧವನ್ನು, ಅಱುಕ್ಕುಮ್–ಭೇದಿಸುವುದು. ಅಪ್ಪಾಲ್ – ಅನನ್ತರ, ಶೆಱಿಪೊೞಿಲ್ – ನಿಬಿಡವಾದ ವೃಕ್ಷೋದ್ಯಾನಗಳುಳ್ಳ, ಅನನ್ತಪುರತ್ತು – ಅನನ್ತಶಯನದಲ್ಲಿ, ಅಣ್ಣಲಾರ್ – ಸ್ವಾಮಿಯಾಗಿರುವವನ, ಕಮಲಪಾದಮ್ – ಕಮಲದಂತೆ ಇರುವ ಪಾದಗಳನ್ನು, ಅಣುಕುವಾರ್–ಆಶ್ರಯಿಸುವವರು, ಅಮರರ್ ಆವಾರ್–ನಿತ್ಯಸೂರಿಗಳಾಗಿ ಹೋಗಿ (ಪರಮಪದದಲ್ಲಿ) ಸೇರುವರು. (ಈ ಪರಮಾರ್ಥವನ್ನು) ನಾಮ್ – ನಾವು, ತಿಣ್ಣಮ್ – ದೃಢವಾಗಿ, ಅಱಿಯ ಚ್ಚೊನ್ನೋಮ್ – (ನೀವು ತಿಳಿಯುವಂತೆ) ಹೇಳಿರುತ್ತೇವೆ.

( ಸ–ಗಾ–ರ ॥ )—
ಭಕ್ತ್ಯಾ ಯೂಯಮಮುಂ ಸಮರ್ಚಯತ ಸತ್ಪುಷ್ಪೈಶ್ಚ ತೀರ್ಥಾನ್ವಿತೈ-
ಸ್ತನ್ನಾಮಾನಿ ಚ ಗಾಯತ ಪ್ರಿಯತಮಾನ್ಯೇತಜ್ಜನಿಂ ನಾಶಯೇತ್ ।
ಯೇ ತಂ ನಾಥಮನನ್ತಶಾಯಿನಗರೇ ಭಕ್ತ್ಯಾ ಭಜನ್ತಿ ಸ್ವಯಂ
ತತ್ಪಾದಪ್ರವಣಾ ಭವನ್ತಿ ಸುದೃಢಂ ಸೂರೀಶ್ವರಾಸ್ತೇ ದಿವಿ ॥

ತಾ॥ ಭಕ್ತಿಯೊಡನೆ ನೀವು ಪರಿಶುದ್ಧವಾದ ತೀರ್ಥದೊಡನೆ ಪುಷ್ಪಗಳನ್ನೂ ತಂದು ಸಮರ್ಪಿಸಿ ನಮ್ಮ ತಂದೆಯಾದ ಸ್ವಾಮಿಯನ್ನು ಆರಾಧಿಸಿ ಅವನ ನಾಮಗಳನ್ನು ಸ್ಮರಿಸಿರಿ. ಇದೇ ಈ ಜನ್ಮಸಮ್ಬನ್ಧವೆಂಬ ಸಂಸಾರಪಾಶವನ್ನು ಭೇದಿಸುವುದು. ದಿವ್ಯೋದ್ಯಾನಪರಿವೃತವಾದ ಅನನ್ತಶಯನದ ಸ್ವಾಮಿಯ ಪಾದಾರವಿನ್ದಗಳನ್ನು ಆಶ್ರಯಿಸುವವರು ನಿತ್ಯಸೂರಿಗಳ ದಿವ್ಯಗೋಷ್ಠಿಯಲ್ಲಿ ಹೋಗಿ ಸೇರುವರು. ಇದು ಸತ್ಯವೆಂದು ದೃಢವಾಗಿ ನಾವು ನಿಮಗೆ ಚೆನ್ನಾಗಿ ತಿಳಿಯುವಂತೆ ಹೇಳಿರುತ್ತೇವೆ.

(೭) ಅಮರರಾಯ್ ತ್ತಿರಿಕಿನ್ಱಾರ್‌ಕಳ್ಳಾದಿಶೇರನನ್ತಪುರತ್ತು,
ಅಮರರ್‌ಕೋನರ್ಚಿಕ್ಕಿನ್ಱಙ್ಗಕಪ್ಪಣಿಶೆಯ್‌ವರ್ ವಿಣ್ಣೋರ್,
ನಮರ್‌ಕಳೋ ಶೊಲ್ಲಕ್ಕೇಣ್ಮಿನ್ ನಾಮುಮ್‌ಪೋಯ್
ನಣುಕವೇಣ್ಡುಮ್,
ಕುಮರನಾರ್ ತಾದೈತುನ್ಬಮ್ ತುಡೈತ್ತ ಗೋವಿನ್ದನಾರೇ.

ಪ್ರ॥ ಕುಮರನಾರ್ ತಾದೈ – ಸುಬ್ರಹ್ಮಣ್ಯನಿಗೆ ತಂದೆಯಾದ ರುದ್ರನ, ತುನ್ಬಮ್ ತುಡೈತ್ತ – (ಪಾತಕದಿಂದ ಬಂದ) ದುಃಖವನ್ನು ನಿವಾರಣಮಾಡಿದ, ಗೋವಿನ್ದನಾರೇ – ಕೃಷ್ಣರೂಪಿಯಾದವನೇ, ಅಮರರಾಯ್ ತಿರಿಕಿನ್ಱಾರ್‌ಕಳ್ಕು- ದೇವತೆಗಳಾಗಿ ಸಂಚರಿಸುವವರಿಗೆ, ಆದಿ- ಆದಿಕಾರಣಭೂತನಾದವನು, ಶೇರ್– ಸೇರಿ ವಾಸಮಾಡುವ, ಅನನ್ತಪುರತ್ತು – ಅನನ್ತಶಯನದಲ್ಲಿ, ಅಮರರ್‌ಕೋ– ನಿತ್ಯಸೂರೀಶ್ವರನಾದ ಸೇನಾಪತಿಯು, ಅರ್ಚಿಕ್ಕಿನ್ಱ – ಆರಾಧಿಸುವ ಕ್ರಮಕ್ಕೆ, ಅಙ್ಗು ಆಕಪ್ಪಣಿ ಶೆಯ್‌ವರ್ – ಆ ಪರಮಪದದಲ್ಲಿ ಅನ್ತರಂಗಕೈಂಕರ್ಯಮಾಡುವ, ವಿಣ್ಣೋರ್-ಪರಮಪದವಾಸಿಗಳಾದ ನಿತ್ಯಸೂರಿಗಳು, ನಮರ್‌ಕಳೋ-ನಮ್ಮವರೇ; ಶೊಲ್ಲಕ್ಕೇಣ್ಮಿನ್–ನಾವು ಹೇಳುವುದನ್ನು ಸತ್ಯವೆಂದು ಕೇಳಿರಿ, ನಾಮುಮ್–ನಾವೂ, ಪೋಯ್ ನಣುಕವೇಣ್ಡುಮ್–ಹೋಗಿ (ಅವರೊಡನೆ) ಸೇರಬೇಕು.

( ಸ–ಗಾ–ರ ॥ )—

ಗೋವಿನ್ದಃ ಕಿಲ ಷಣ್ಮುಖಸ್ಯ ಜನಕಂ ಸರ್ವೋಚ್ಚಯನ್ ಪಾತಕಾ-
ದ್ದೇವಾನಾಮಪಿ ಚಾದಿರೇವ ಪರಮೋ ಯೋಽನನ್ತಪುರ್ಯಾಶ್ರಯಃ।
ತಂ ಸೇನಾಪತಿರರ್ಚಯತ್ಯನುದಿನಂ ನಿತ್ಯೈಶ್ಚ ಮುಕ್ತೈಸ್ಸ್ವಯಂ
ಭಕ್ತಾಸ್ತೇಽಪಿ ಚ ಬಾನ್ಧವಾ ಇತಿ ವಯಂ ಭೂಯಾಸ್ಮ ತೈಸ್ಸಙ್ಗತಾಃ ॥

ತಾ॥ ಸುಬ್ರಹ್ಮಣ್ಯನಿಗೆ ತಂದೆಯಾದ ರುದ್ರನಿಗೆ ಪಾತಕಗಳಿಂದ ಉಂಟಾದ ಕ್ಲೇಶವನ್ನು ನಿವಾರಣಮಾಡಿದ ಶ್ರೀಕೃಷ್ಣಸ್ವಾಮಿಯೇ ದೇವತೆಗಳಿಗೆಲ್ಲಾ ಆದಿ ಕಾರಣಭೂತನಾಗಿ ಈಗ ಅನನ್ತಶಯನದಲ್ಲಿ ನಿತ್ಯವಾಸಮಾಡುತ್ತ ಪರಮಪದ ವಾಸಿಗಳಾದ ಸೇನಾಧಿಪತಿಪ್ರಭೃತಿಗಳಾದ ನಿತ್ಯಸೂರಿಗಳಿಂದ ಅರ್ಚಿತನಾಗಿರುತ್ತಾನೆ. ಅವರೆಲ್ಲರೂ ನಮ್ಮವರೇ. ನಾವು ಹೇಳುವ ಇದನ್ನು ಸತ್ಯವೆಂದು ತಿಳಿಯಿರಿ ನಾವೂ ಅವರೊಡನೆ ಹೋಗಿ ಸೇರಬೇಕು.

(೭) ತುಡೈತ್ತ ಗೋವಿನ್ದನಾರೇ ಉಲಕುಯಿರ್ ತೇವುಮ್
ಮಱ್ಱುಮ್,
ಪಡೈತ್ತವೆಮ್ ಪರಮಮೂರ್ತಿ ಪಾಮ್ಬಣೈ
ಪ್ಪಳ್ಳಿಕೊಣ್ಡಾನ್,
ಮಡೈತ್ತಲೈ ವಾಳೈಪಾಯುಮ್ ವಯಲಣಿಯನನ್ತಪುರಮ್
ಕಡೈತ್ತಲೈಶೀಯ್ಕ್ಕ ಪ್ಪೆಱ್ಱಾಲ್
ಕಡುವಿನೈಕಳೈಯಲಾಮೇ.

ಪ್ರ॥ ಉಲಕು-(ಸಕಲ) ಲೋಕಗಳನ್ನೂ, ಉಯಿರ್ – ಜೀವರಾಶಿಗಳನ್ನೂ, ತೇವುಮ್-ದೇವತೆಗಳನ್ನೂ, ಮಱ್ಱುಮ್–ಮತ್ತೂ ಮಹದಾದಿಪದಾರ್ಥಗಳನ್ನೂ, ತುಡೈತ್ತ–ಸಂಹರಿಸಿದ, ಗೋವಿನ್ದನಾರೇ ಗೋವಿನ್ದನಾದವನೇ, ಪಡೈತ್ತ–ಸೃಷ್ಟಿ ಮಾಡಿದ, ಎಮ್–ನಮ್ಮ, ಪರಮಮೂರ್ತಿ – ಸರ್ವಶ್ರೇಷ್ಠನಾದ ಸ್ವಾಮಿಯಾಗಿ, ಪಾಮ್ಬಣೈ–ಶೇಷಶಯನದಲ್ಲಿ, ಪಳ್ಳಿಕೊಣ್ಡಾನ್ – ನಿದ್ರೆಮಾಡುವವನಾದ ಸರ್ವೇಶ್ವರನ, ಮಡೈತ್ತಲೈ–ಜಲಪ್ರದೇಶಗಳಲ್ಲಿ, ವಾಳೈಪಾಯುಮ್–ಮೀನುಗಳು ನುಗ್ಗುತ್ತಿರುವ, ವಯಲ್–ಸಸ್ಯಕ್ಷೇತ್ರಗಳನ್ನು, ಅಣಿ-ಅಲಂಕಾರವಾಗಿ ಉಳ್ಳ, ಅನನ್ತಪುರಮ್ – ಅನನ್ತಶಯನದಲ್ಲಿ, ಕಡೈತ್ತಲೈ – ದ್ವಾರಪ್ರದೇಶಗಳಲ್ಲಿ, ಶೀಯ್ಕ್ಕ ಪ್ಪೆಱ್ಱಾಲ್–ಸಮ್ಮಾರ್ಜನಾದಿ ಕೈಙ್ಕರ್ಯವನ್ನು ಮಾಡುವ ಭಾಗ್ಯವನ್ನು ಪಡೆದರೆ, ಕಡುವಿನೈ – ಮಹಾಪಾಪಗಳನ್ನೆಲ್ಲಾ, ಕಳೈಯಲಾಮೇ – ನಾವು ನಾಶಪಡಿಸಬಹುದಷ್ಟೆ !

( ಸ–ಗಾ–ರ )—

ಲೋಕಾನ್ ಜೀವಾಂಶ್ಚ ದೇವಾನಖಿಲಮಿತರದಪ್ಯೇಷ ಭುಕ್ತ್ವಾ ಚ ಸೃಷ್ಟ್ವಾ
ಗೋವಿನ್ದೋ ಭಾತಿ ಮೂರ್ತಿಃ ಪರಮಗುಣಮಣಿಶ್ಶೇಷಶಾಯೀ ವಿಭುರ್ನಃ ।
ಕ್ಷೇತ್ರೈರ್ಮೀನಾಳಿಯುಕ್ತೈರ್ವಿಲಸಿತವಿಭವೇ ಽನನ್ತಪುರ್ಯಾಖ್ಯದೇಶೇ !
ತತ್ರ ದ್ವಾರಾದಿಶುದ್ಧಿಕ್ರಮಕೃತಮನಸಾಂ ಸರ್ವಪಾಪಂ ಪ್ರಣಶ್ಯೇತ್ ॥

ತಾ॥ ಸಕಲಲೋಕಗಳನ್ನೂ ಜೀವರಾಶಿಗಳನ್ನೂ ದೇವತೆಗಳನ್ನೂ ಮಹದಾದಿ ಪದಾರ್ಥಗಳನ್ನೂ ಸಂಹರಿಸಿದ ಗೋವಿನ್ದನೇ ಸೃಷ್ಟಿಮಾಡಿದ ನಮ್ಮ ಪರಮಮೂರ್ತಿಯಾಗಿ ಶೇಷಶಯನದಲ್ಲಿ ನಿದ್ರೆಮಾಡುವ ಸರ್ವೇಶ್ವರನು. ಇವನು ವಾಸಮಾಡುವ ಸಸ್ಯಕ್ಷೇತ್ರಾಲಂಕೃತವಾದ ಅನನ್ತಶಯನದ ದ್ವಾರಪ್ರದೇಶಗಳಲ್ಲಿ ಸಮ್ಮಾರ್ಜನಾದಿ ಕೈಂಕರ್ಯವಂಮಾಡುವ ಭಾಗ್ಯವನ್ನು ಪಡೆದರೆ ಮಹಾಪಾಪಗಳನ್ನೆಲ್ಲಾ ನಾವು ಧ್ವಂಸಮಾಡಬಹುದು.

(೮) ಕಡುವಿನೈ ಕಳೈಯಲಾಕುಮ್ ಕಾಮನೈಪ್ಪಯನ್ದಕಾಳೈ,
ಇಡವಕೈ ಕೊಣ್ಡದೆನ್ಬರೆೞಿಲಣಿ ಯನನ್ತಪುರಮ್,
ಪಡಮುಡೈ ಯರವಿಲ್ಪಳ್ಳಿ ಪಯಿನ್ಱವನ್ ಪಾದಮ್ ಕಾಣ,
ನಡಮಿನೋ ನಮರ್ಗಳುಳ್ಳೀರ್ ನಾಮುಮಕ್ಕಱಿಯ
ಚ್ಚೊನ್ನೋಮ್.

ಪ್ರ॥ ಕಡುವಿನೈ – ಕ್ರೂರವಾದ ಪಾಪಗಳನ್ನು, ಕಳೈಯಲಾಕುಮ್–ನಾಶ ಪಡಿಸಬಹುದು. ಕಾಮನೈಪ್ಪಯನ್ದ – ಮನ್ಮಥನನ್ನು ಹೆತ್ತ, ಕಾಳೈ – ಕೃಷ್ಣನಾದವನು, ಇಡವಕೈಕೊಣ್ಡದು–ವಾಸಸ್ಥಲವಾಗಿ ಮಾಡಿಕೊಂಡಿರುವುದು, ಎೞಿಲ್ ಅಣಿ–ಸೌನ್ದರ್ಯದಿಂದ ಅಲಂಕೃತವಾದ, ಅನನ್ತಪುರಮ್–ಅನನ್ತಶಯನವೆಂಬ ದಿವ್ಯದೇಶವು, ಎನ್ಬರ್–ಎಂದು ಹೇಳುವರು. ಪಡಮುಡೈ – ಫಣೆಗಳುಳ್ಳ, ಅರವಿಲ್–ಶೇಷರೂಪಿಯಾದ ಶಯನದಲ್ಲಿ, ಪಳ್ಳಿಪಯಿನ್ಱವನ್–ಶಯನಮಾಡುವುದರಲ್ಲಿ ಆದರವುಳ್ಳವನ, ಪಾದಮ್–ಪಾದಗಳನ್ನು, ಕಾಣ–ಕಾಣಲು (ಕಂಡು ಅನುಭವಿಸುವುದಕ್ಕೋಸ್ಕರ), ನಮರ್ಗಳ್ ಉಳ್ಳೀರ್ – ನಮ್ಮವರಾದವರೇ, ನಡಮಿನ್ – ನೀವು ಹೊರಡಿರಿ. ನಾಮ್ – ನಾವು, ಉಮಕ್ಕು – ನಿಮಗೆ, ಅಱಿಯಚ್ಚೊನ್ನೋಮ್– ತಿಳಿಯುವಂತೆ ಹೇಳಿ ಇರುತ್ತೇವೆ.

( ಸ- ಗಾ–ರ ॥ )—

ಪಾಪಂ ನಶ್ಯತಿ ! ಮನ್ಮಥಸ್ಯ ಜನಕಃ ಕೃಷ್ಣೋ ವಿಭಾತಿ ಸ್ವಯಂ
ದಿವ್ಯೇಽನನ್ತಪುರೇ ಸದೇತಿ ಚ ಜಗುಃ ! ಶೇಷೇ ಶಯಾನಸ್ಯ ಚ !
ತಸ್ಯಾಂಘ್ರಿದ್ವಯದರ್ಶನಾಯ ನಿರತಾ ಯೂಯಂ ಸಮಾಗಚ್ಛತ !
ಭ್ರಾನ್ತಿರ್ಮಾಽಸ್ತು ಚ ಸಂಶಯೋಽದ್ಯ ! ವಿಶದಂ ಸರ್ವಂ ವದಾಮೋ
ವಯಮ್॥

ತಾ॥ ಕ್ರೂರವಾದ ಪಾಪಗಳನ್ನೆಲ್ಲಾ ನಾವು ನಾಶಪಡಿಸಬಹುದು. (ಹೇಗೆಂದರೆ) ಮನ್ಮಥಜನಕನಾದ ಕೃಷ್ಣನ ವಾಸಸ್ಥಲವು ಸೌನ್ದರ್ಯದಿಂದ ದಿವ್ಯಾಲಂಕಾರವುಳ್ಳ ಅನನ್ತಶಯನವೆಂಬ ದಿವ್ಯದೇಶವು ಎಂದು ಹೇಳುವರು. ಅಲ್ಲಿ ಶೇಷಶಯನದಲ್ಲಿ ಆದರವುಳ್ಳ ಸ್ವಾಮಿಯ ಪಾದಗಳನ್ನು ಕಂಡು ಅನುಭವಿಸುವುದಕ್ಕೋಸ್ಕರ ನಮ್ಮವರಾದ ನೀವುಗಳೆಲ್ಲರೂ ಹೊರಡಿರಿ. ನಾವು ನಿಮಗೆ ಈ ರಹಸ್ಯವನ್ನು ಚೆನ್ನಾಗಿ ತಿಳಿಯುವಂತೆ ಉಪದೇಶಿಸಿ ಇರುತ್ತೇವೆ.

(೯) ನಾಮುಮಕ್ಕಱಿಯ ಚ್ಚೊನ್ನ ನಾಳ್‌ಕಳುಮ್ ನಣಿಯುವಾನ
ಶೇಮನನ್ಗುಡೈತ್ತುಕ್ಕಣ್ಡೀರ್ ಶೆಱಿಪೊಳಿಲನನ್ತಪುರಮ್,
ತೂಮನಲ್ ವಿರೈಮಲರ್‌ಕಳ್ ತುವಳಱ
ವಾಯ್‌ನ್ದುಕೊಣ್ಡು,
ವಾಮನನಡಿಕ್ಕೆನ್ರೇತ್ತ ಮಾಯ್‌ನ್ದಱುಮ್ ವಿನೈಕಳ್ ತಾನೇ.

ಪ್ರ॥ ನಾಮ್-ನಾವು, ಉಮಕ್ಕು-ನಿಮಗೆ, ಅಱಿಯಚ್ಚೊನ್ನ-ತಿಳಿಯುವಂತೆ ಹೇಳಿದ, ನಾಳ್‌ಕಳುಮ್-(ಅನ್ತಿಮ) ದಿನಗಳೂ, ನಣಿಯುವಾನ-ಸಮೀಪಿಸಿದುವು. ಶೆಱಿಪೊಳಿಲ್-ನಿಬಿಡವಾದ ವೃಕ್ಷಷಣ್ಡಗಳುಳ್ಳ, ಅನನ್ತಪುರಮ್-ಅನನ್ತಶಯನವು, ನನ್ಗು-ಚೆನ್ನಾಗಿ, ಶೇಮಮ್ ಉಡೈತ್ತು ಕಣ್ಡೀರ್ – ರಕ್ಷೆಯನ್ನು ಪಡೆದಿರುತ್ತದೆ ನೋಡಿರಿ. ತೂಮಮ್-ಧೂಮರೂಪವಾದ ಧೂಪವನ್ನು, ನಲ್ ವಿರೈಮಲರ್‌ಕಳ್ – ಒಳ್ಳೇ ಪರಿಮಳವುಳ್ಳ ಪುಷ್ಪಗಳನ್ನೂ, ತುವಳಱ ಆಯ್‌ನ್ದುಕೊಣ್ಡು – ದೋಷವಿಲ್ಲದಂತೆ ಸಂಪಾದಿಸಿಕೊಂಡು, ವಾಮನನ್ ಅಡಿಕ್ಕು ಎನ್ಱು – ಶ್ರೀವಾಮನನ ಪಾದಗಳಿಗೆಂದು ಉದ್ದೇಶಿಸಿ, ಏತ್ತ – ಅವನ ಶೀಲಾದಿ ಗುಣಗಳನ್ನು ಸ್ತುತಿಸಲು, ವಿನೈಕಳ್ – (ಕೈಙ್ಕರ್ಯಪ್ರತಿಬನ್ಧಕವಾದ) ಪಾಪಗಳು, ತಾನೇ – ತಾವಾಗಿಯೇ, ಮಾಯ್‌ನ್ದು ಅಱುಮ್-ನಾಶಹೊಂದುವುವು

( ಸಂ-ಗಾ-ರ ॥ )—

ಅಸ್ಮಾಭಿಃ ಕಥಿತಾನಿ ತಾನಿ ಚ ದಿನಾನ್ಯದ್ಯಾಗತಾನಿ ಸ್ವಯಂ !
ದಿವ್ಯೇಽನನ್ತಪುರೇ ವರೇ ಸುರುಚಿರೋದ್ಯಾನೇಽದ್ಯ ರಕ್ಷಾಽಸ್ತಿ ನಃ ।
ಧೂಪಂ ದಿವ್ಯಸುಗನ್ಧಿಪುಷ್ಪಸರಣಿಂ ಶ್ರೀವಾಮನಾಂಘ್ರಿದ್ವಯೇ
ಕರ್ತುಂ ಸ್ತೋತುಮಿಮಂ ಚ ಸಕ್ತಮನಸಾಂ ಪಾಪಾನಿ ನಶ್ಯನ್ತ್ಯಹೋ!॥

ತಾ॥ ನಾವು ನಿಮಗೆ ತಿಳಿಸಿ ಇದ್ದ (ಅನ್ತಿಮಕಾಲದ) ದಿನಗಳು ಸಮೀಪಿಸಿದುವು. ನಿಬಿಡ ವೃಕ್ಷಷಣ್ಡಗಳುಳ್ಳ ಅನನ್ತಶಯನವು ನಮಗೆಲ್ಲಾ ರಕ್ಷೆಯನ್ನು ಉಂಟುಮಾಡುವುದು—ನೋಡಿರಿ. ದಿವ್ಯವಾದ ಧೂಪವನ್ನೂ ಪರಿಮಳವುಳ್ಳ ಪುಷ್ಪಗಳನ್ನೂ ಸಮ್ಪಾದಿಸಿಕೊಂಡು ಬಂದು ಶ್ರೀವಾಮನನ ಪಾದಗಳಲ್ಲಿ ಸಮರ್ಪಿಸಿ ಅವನನ್ನು ಸ್ತುತಿಸಿದರೆ ಸಕಲವಿಧವಾದ (ಕೈಂಕರ್ಯಪ್ರತಿಬನ್ಧಕರೂಪವಾದ) ಪಾಪಗಳೂ ತಾವಾಗಿಯೇ ನಷ್ಟವಾಗುವುವು.

(೧೦) ಮಾಯ'ನ್ದಱುಮ್ ವಿನೈಕಳ್ ತಾನೇ ಮಾದವಾವೆನ್ನ,
ನಾಳುಮ್
ಏಯ'ನ್ದ ಪೊನ್ಮದಿಳನನ್ತಪುರನಕರೆನ್ದೈಕ್ಕೆನ್ರು,
ಶಾನ್ದೊಡುವಿಳಕ್ಕಮ್ ತೂಪಮ್ ತಾಮರೈಮಲರ್ಕಳ್
ನಲ್ಲ,
ಆಯ'ನ್ದು ಕೊಣ್ಡೇತ್ತ ವಲ್ಲಾರನ್ದಮಿಲ್ ಪುಕಳಿನಾರೇ.

ಪ್ರ|| ಮಾದವಾ ಎನ್ನ – ಮಾಧವ! (ಶ್ರಿಯಃಪತಿಯೇ!) ಎಂದು ಹೇಳಿದ ಒಡನೇ, ವಿನೈಕಳ್ – ಪಾಪಗಳೆಲ್ಲಾ (ಪ್ರತಿಬನ್ಧಕಗಳೆಲ್ಲಾ), ತಾನೇ – ತಾವೇ, ಮಾಯ್'ನ್ದು ಅಱುಮ್ – ನಾಶಹೊಂದುವುವು. ನಾಳುಮ್ – ಪ್ರತಿದಿನವೂ, ಏಯ್'ನ್ದ– ಉನ್ನತವಾಗಿ ವ್ಯಾಪಿಸಿರುವ, ಪೊನ್ಮದಿಳ್ – ಸ್ವರ್ಣಮಯ ಪ್ರಾಕಾರಗಳಿಂದ ಕೂಡಿದ, ಅನನ್ತಪುರನಕರ್–ಅನನ್ತಶಯನವೆಂಬ ನಗರದ, ಎನ್ದೈಕ್ಕು– ನಮ್ಮ ಸ್ವಾಮಿಗೆ, ಎನ್ರು–ಎಂದು ಸಂಕಲ್ಪಿಸಿ, ನಲ್ಲ–ಶ್ಲಾಘ್ಯವಾದ, ಶಾನ್ದೊಡು – ಚನ್ದನದೊಡನೆ, ವಿಳಕ್ಕಮ್–ದೀಪವನ್ನೂ, ತೂಪಮ್–ಧೂಪವನ್ನೂ, ತಾಮರೈ ಮಲರ್ಕಳ್–ತಾವರೆಹೂವುಗಳನ್ನೂ, ಆಯ್'ನ್ದುಕೊಣ್ಡು – ಸಂಪಾದಿಸಿಕೊಂಡು ಬಂದು, ಏತ್ತವಲ್ಲಾರ್–ಸ್ತೋತ್ರಮಾಡಿ ಆರಾಧಿಸಬಲ್ಲವರು, ಅನ್ದಮಿಲ್ – ಅನ್ತವಿಲ್ಲದ (ಅಪಾರವಾದ), ಪುಕಳಿನಾರ್–ಮಹಾಯಶಸ್ಸುಳ್ಳವರಾಗಿ ಆಗುವರು.

( ಸ–ಗಾ–ರ || )—

ಭಕ್ತ್ಯಾ ಶ್ರೀದಿಶ ಮಾಧವೇತಿ ಸಕೃದಪ್ಯಾಹುಸ್ಸ್ವಯಂ ಭಕ್ತಿತಃ
ಪಾಪಾನಿ ಪ್ರಹತಾನಿ ತಾನಿ! ಕನಕಪ್ರಾಕಾರಸಂಶೋಭಿತೇ |
ದಿವ್ಯೇಽನನ್ತಪುರೇ ಹರೇರ್ಭುವಿ ತು ಯೇ ಸ್ತೋತ್ರಂ ಚ ನಾಥಸ್ಯ ನಃ
ಕುರ್ಯುರ್ಧೂಪಸುದೀಪಗನ್ಧಕುಸುಮೈಸ್ತೇ ಯಾನ್ತಿ ಕೀರ್ತಿಂ ಪರಾಮ್ ||

ತಾ|| ಮಾಧವ! —ಎಂದು ಹೇಳಿದ ಒಡನೇ ಸಕಲಪಾಪಗಳೂ ತಾವೇ ನಷ್ಟವಾಗುವುವು. ಉನ್ನತಸ್ವರ್ಣಮಯಪ್ರಾಕಾರಗಳುಳ್ಳ ಅನನ್ತಶಯನದ ಸ್ವಾಮಿಗೆ— ಎಂದು ಉದ್ದೇಶಿಸಿ ಪ್ರತಿದಿನವೂ ಶ್ಲಾಘ್ಯವಾದ ಚನ್ದನ–ದೀಪ–ಧೂಪ–ಪದ್ಮಗಳನ್ನು ಸಂಪಾದಿಸಿಕೊಂಡು ಬಂದು ಸ್ತೋತ್ರಮಾಡಿ ಆರಾಧಿಸಬಲ್ಲವರು ಅಪಾರವಾದ ಮಹಾಯಶಸ್ಸುಳ್ಳವರಾಗಿ (ಪರಮಪದದಲ್ಲಿ) ಬಾಳುವರು

(೧೧) ಅನ್ದಮಿಲ್ ಪುಕ್ಕ್ಯನನ್ತಪುರನಕರಾದಿ ತನ್ನೈ,
ಕೊನ್ದಲರ್ಪೊೞಿಲ್ ಕುರುಕೂರ್ ಮಾಱನ್
ಶೊಲ್ಲಾಯಿರತ್ತುಳ್,
ಇನ್ದಿನೋಡೈನ್ದುಮ್ ವಲ್ಲಾರಣೈವರ್ಪೋಯಮರುಲಕಿಲ್,
ಪೈನ್ದೊಡಿಮಡನ್ದೈಯರ್ತಮ್
ವೇಯ್ಮರುತೋಳಿಣೈಯೇ.

ಪ್ರ॥ ಅನ್ದಮಿಲ್ ಪುಕೞ್–ಅಪಾರವಾದ ಕೀರ್ತಿಯುಳ್ಳ, ಅನನ್ತಪುರನಕರ್–ಅನನ್ತಶಯನ ನಗರದಲ್ಲಿರುವ, ಆದಿತನ್ನೈ–ಜಗತ್ಕಾರಣಭೂತನನ್ನು, ಕೊನ್ದು – ಪುಷ್ಪಗುಚ್ಛಗಳು, ಅಲರ್ – ವಿಕಸಿಸುವ, ಪೊೞಿಲ್ – ಉದ್ಯಾನಗಳುಳ್ಳ, ಕುರುಕೂರ್ – ಕುರುಕಾಪುರಿಯ, ಮಾಱನ್–ಶಠಾರಿಮುನಿಯು, ಶೊಲ್–ಸ್ತುತಿಸಿ ರಚಿಸಿರುವ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಇನ್ದಿನೋಡು ಐನ್ದುಮ್–ಐದುಪದ್ಯಗಳೊಡನೆ ಐದುಪದ್ಯಗಳಾದ ಈ ಹತ್ತುಪದ್ಯಗಳನ್ನೂ, ವಲ್ಲಾರ್ – ಬಲ್ಲವರು, ಪೋಯ್–(ಅರ್ಚಿರಾದಿಮಾರ್ಗದಿಂದ) ಹೋಗಿ, ಅಮರ್ ಉಲಕಿಲ್ ನಿತ್ಯಸೂರಿಗಳಲೋಕವಾದ ಪರಮಪದದಲ್ಲಿ, ಪೈನ್ದೊಡಿ – ಸ್ವರ್ಣಮಯವಾದ ಹಸ್ತಾಭರಣಗಳುಳ್ಳ, ಮಡನ್ದೈಯರ್ತಮ್–ದಿವ್ಯಾಪ್ಸರಸ್ಸುಗಳ, ವೇಯ್ಮರು–ಬಿದುರಿನಂತೆ ದುಂಡಾಗಿ ರಮ್ಯವಾದ, ತೋಳಿಣೈಯೇ – ತೋಳುಗಳಿಂದ ಮಾಡಲ್ಪಡುವ ಬ್ರಹ್ಮಾಲಙ್ಕಾರವನ್ನು, ಅಣೈವರ್–ಹೊಂದುವರು.

( ಸ–ಗಾ–ರ ॥ )—

ದಿವ್ಯಾನನ್ತಪುರೇಶ್ವರಂ ಚ ಜಗತಾಮಾದಿಂ ಹರಿಂ ಶ್ರೀಧರಂ
ಸ್ತೋತುಂ ಶ್ರೀಕುರುಕೇಶ್ವರಶ್ಶಠರಿಪುಃ ಪಞ್ಚಾಪಿ ಪಞ್ಚಾಬ್ರವೀತ್ ।
ಸಾಹಸ್ರೇ ತದಿದಂ ಪಠನ್ತಿ ದಶಕಂ ಯೇ ಧಾಮ್ನಿ ದಿವ್ಯೇ ಸ್ವಯಂ
ತೇ ಗತ್ವಾ ಹಿ ಭಜನ್ತಿ ದಿವ್ಯಲಲನಾಹಸ್ತೈಶ್ಶುಭಾಲಂಕ್ರಿಯಾಮ್ ॥

ತಾ॥ ಅಪಾರವಾದ ಕೀರ್ತಿಯುಳ್ಳ ಅನನ್ತ ಶಯನದಲ್ಲಿ ವಾಸಮಾಡುವ ಜಗತ್ಕಾರಣಭೂತನನ್ನು, ವಿಕಸಿತ ಪುಷ್ಪೋದ್ಯಾನಭರಿತವಾದ ಕುರುಕಾಪುರಿಯ ಶ್ರೀ ಶಠಾರಿಮುನಿಯು ಸ್ತುತಿಸಿ ರಚಿಸಿರುವ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು (ಐದುಪದ್ಯಗಳೊಡನೆ ಐದು ಕೂಡಿದ ಹತ್ತುಪದ್ಯಗಳನ್ನು) ಪಠಿಸಬಲ್ಲವರು ಅರ್ಚಿರಾದಿ ಮಾರ್ಗದಿಂದ ಹೋಗಿ ಪರಮಪದದಲ್ಲಿ ದಿವ್ಯಾಪ್ಸರಸ್ಸುಗಳ ಬಾಹು ಸಂಶ್ಲೇಷವಂ ಪಡೆದು ಬ್ರಹ್ಮಾಲಂಕಾರವನ್ನು ಹೊಂದಿ ಕೃತಾರ್ಥರಾಗುವರು.

( ದ್ರ–ಉ–ಸಂ ॥ )—

ವೈಕುಣ್ಠಮೇತ್ಯ ಕರಣೀಯಮಶೇಷದಾಸ್ಯ-
ಮತ್ರೈವ ಕೇವಲಮನನ್ತಪುರೇ ವಿಧಿತ್ಸನ್ ।
ಪ್ರಾಪ್ಯತ್ವಮಸ್ಯ ದುರಿತೌಘನಿವರ್ತನಂ ಚ
ಪ್ರಾಚೀಕಶತ್ತನುಭೃತಾಂ ಶಠಜಿದ್ದ್ವಿತೀಯೇ ॥

( ದ್ರ–ಉ–ತಾ–ರ ॥ )—

ಊಚೇ ಶ್ರೀಕೇಶವತ್ವಾದದ್ಭುತಚರಿತಖಗಾಧೀಶಕೇತುತ್ವಯೋಗಾ-
ದಾಸನ್ನತ್ವಾತ್ ಪತಿತ್ವಾದಮರಪರಿಷದಾಮಾದಿಭೂತತ್ವಭೂಮ್ನಾ ।
ವ್ಯಾಪಾರೈಸ್ಸೃಷ್ಟಿಮುಖ್ಯೈರಪಿ ಚ ಭುಜಗಶಾಯಿತ್ವಮುಖ್ಯೈಶ್ಚರಿತ್ರೈ-
ರಧ್ವಕ್ಲೇಶಾಪಹರ್ತಾ ಭವತಿ ಚ ಭಗವಾನಿತ್ಯನನ್ತೇ ಶಠಾರಿಃ ॥

(ಈ ದ್ವಿತೀಯದಶಕದ ಸಾರಾಂಶ—)

ಈ ಎರಡನೆಯದಶಕದಲ್ಲಿ—ಶ್ರೀಶಠಾರಿಮುನಿವರ್ಯರು ಅನನ್ತಶಯನದಲ್ಲಿ ಶೇಷಶಾಯಿಯಾಗಿರುವ ಸ್ವಾಮಿಯನ್ನೇ ಆಶ್ರಯಿಸಬೇಕೆಂದು ಉಪದೇಶಿಸುತ್ತ, ಆ ದಿವ್ಯದೇಶವೇ ಪರಮಪದವೆಂತಲೂ, ಅಲ್ಲಿ ಪ್ರವೇಶಿಸಿದರೆ ಸಕಲಪಾಪಗಳೂ ನಷ್ಟವಾಗುವುವೆಂತಲೂ, ಆ ಸ್ವಾಮಿಯ ಒಂದು ನಾಮವನ್ನು ಹೇಳಿದರೆ ಸಹಸ್ರನಾಮ ಪಠನದ ಫಲವು ಉಂಟಾಗುವುದೆಂತಲೂ, ಅವನನ್ನೇ ದಿವ್ಯ ಧೂಪ-ದೀಪ-ಚನ್ದನ-ಕುಸುಮಾದಿಗಳಿಂದ ಆರಾಧಿಸಿ ಸ್ತುತಿಸಬೇಕೆಂತಲೂ, ಆ ದಿವ್ಯದೇಶದ ಸ್ವಾಮಿಯನ್ನು ಆರಾಧಿಸಿದರೆ ಪರಮಪದದಲ್ಲಿ ದಿವ್ಯಸೂರಿಗೋಷ್ಠಿಯಲ್ಲಿ ನಿತ್ಯವಾಸವು ಉಂಟಾಗುವುದೆಂತಲೂ ಸಕಲ ಚೇತನೋಜ್ಜೀವನಕ್ಕಾಗಿ ಕ್ರಮೇಣ ಪರಮರಹಸ್ಯವನ್ನು ಬೋಧಿಸಿ ಇರುತ್ತಾರೆ.

ಶ್ರೀಃ

# ದಶಮಶತಕದಲ್ಲಿ—ತೃತೀಯದಶಕ.

(ವೇಯ್‌ಮರುತೋಳ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂಪಡೆದು ಶ್ರೀ ಭಗವಂತನ ಕಲ್ಯಾಣಗುಣಗಳನ್ನು ಸ್ಮರಿಸಿ ಅವನ ವಿಶ್ಲೇಷವಂ ಸಹಿಸಲಾರದೆ, ಗೋಪಿಗಳು ಶ್ರೀಕೃಷ್ಣನ ವಿರಹದಿಂದ ಸಂತಪ್ತರಾಗಿ ಅನುಭವಿಸಿದ ರೀತಿಯಲ್ಲಿ ತಾವೂ ಅನುಭವಿಸಿ ಮೊರೆಯಿಡುತ್ತಾರೆ.)

---

(೧) ವೇಯ್‌ಮರುತೋಳಿಣೈಮೆಲಿಯುಮಾಲೋ, ಮೆಲಿವುಮೆನ್
ತನಿಮೈಯುಮ್ ಯಾದುಮ್ ನೋಕ್ಕಾ,
ಕಾಮರು ಕುಯಿಲ್‌ಕಳುಮ್ ಕೂವುಮಾಲೋ,
ಕಣಮಯಿಲವೈ ಕಲನ್ದಾಲುಮಾಲೋ,
ಆಮರುವಿನನಿರೈ ಮೇಯ್‌ಕ್ಕ ನೀ ಪೋಕ್ಕೊರು
ಪಕಲಾಯಿರಮೂಳಿಯಾಲೋ,
ತಾಮರೈಕ್ಕಣ್‌ಕಳ್ ಕೊಣ್ಡೀರ್‌ದಿಯಾಲೋ ತಕವಿಲೈ
ತಕವಿಲೈಯೇ ನೀ ಕಣ್ಣಾ.

ಪ್ರ॥ ವೇಯ್‌ಮರು – ಬೊಂಬಿನಂತೆ ದುಂಡಾಗಿದ್ದ, ತೋಳಿಣೈ – ತೋಳುಗಳೆರಡೂ, ಮೆಲಿಯುಮ್ - ಕೃಶವಾಗುತ್ತಿವೆ. ಎನ್ ಮೆಲಿವುಮ್–ನನ್ನ ಶರೀರದ ಕಾರ್ಶ್ಯವನ್ನೂ, ಎನ್ ತನಿಮೈಯುಮ್–ನನ್ನ ವಿರಹವೇದನೆಯನ್ನೂ, ಯಾದುಮ್ ನೋಕ್ಕಾ – ಯಾವುದನ್ನೂ (ಸ್ವಲ್ಪವೂ) ನೋಡದೆ, ಕಾಮರು – ರಮ್ಯವಾದ, ಕುಯಿಲ್‌ಕಳುಮ್ – ಕೋಕಿಲೆಗಳು, ಕೂವುಮ್ ಆಲೋ – ಕೂಗುತ್ತಿವೆ. ಕಣಮಯಿಲ್ ಅವೈ – ಗುಂಪು ಗುಂಪಾಗಿರುವ ನವಿಲುಗಳು, ಕಲನ್ದು ಆಲುಮಾಲೋ–ಕೂಡಿ ಆಡುತ್ತಿವೆ. ಆಮರು–ಪಶುಗಳೆಲ್ಲಾ ಸೇರಿ, ಇನಮ್‌ನಿರೈ – ಜೋಡಿಯಾದ ಸಂಘಗಳನ್ನು, ಮೇಯ್‌ಕ್ಕ–ಮೇಯಿಸಲು, ನೀಪೋಕ್ಕು–ನೀನು ಹೋಗುತ್ತಿರುವ, ಒರುಪಕಲ್–ಒಂದು ಹಗಲು, ಆಯಿರಮ್ ಊಳಿ ಆಲೋ– ಸಾವಿರ ಕಲ್ಪಗಳಿಗೆ ಸಮಾನವಾಗುತ್ತಿದೆ. ತಾಮರೈಕ್ಕಣ್‌ಕಳ್‌ಕೊಣ್ದು –ತಾವರೆ

ಯಂತೆ ಇರುವ ಕಣ್ಣುಗಳಮೂಲಕ, ಈರ್‌ದಿಯಾಲೋ – ನಮ್ಮನ್ನು ಸೀಳುತ್ತಿದ್ದೀಯೆ. ಕಣ್ಣಾ–ಎಲೈ ಕೃಷ್ಣನೇ! (ಸ್ತ್ರೀಗಳನ್ನು ಕ್ಲೇಶಪಡಿಸುವವನೇ), ನೀ ತಕವು ಇಲೈ–ನೀನು ಸಾಮಾನ್ಯ ಕೃಪೆಯುಳ್ಳವನೂ ಅಲ್ಲ. ತಕವಿಲೈಯೇ–(ನೋವು ಅನುಭವಿಸಿದವರನ್ನು ಹಿಂಸಿಸಬಾರದೆಂಬ) ವಿಶೇಷಕೃಪೆಯನ್ನೂ ಉಳ್ಳವನಲ್ಲ.

( ಸ–ಗಾ–ರ || )—

ಬಾಹುದ್ವನ್ದ್ವಂ ಕೃಶಂ ಹಾ! ಬತ! ತನುಕೃಶತಾಂ ಮೇ ನ
ಪಶ್ಯೋದ್ವಿಯೋಗಂ
ಕೂಜನ್ತೀ ಕೋಕಿಲಾಳಿಸ್ಸಪದಿ ಬತ! ಮಯೂರಾವಳಿರ್ನೃತ್ತಸಕ್ತಾ |
ಗೋಸಂಘಾನುಪ್ರಯಾತೇ ತ್ವಯಿ ಮಮ ಹಿ ದಿನಂ ಕಲ್ಪಸಾಹಸ್ರಮೇವ !
ತ್ವನ್ನೇತ್ರಾಬ್ಜದ್ವಯಂ ಮಾಂ ತುದತಿ ಬತ! ಹರೇ! ಕೃಷ್ಣ! ನ ತ್ವಂ
ದಯಾಳುಃ ||

ತಾ|| ನನ್ನ ತೋಳುಗಳೆರಡೂ ಪುಷ್ಟಿಯಾಗಿದ್ದುವು, ಈಗ ಕೃಶವಾಗಿವೆ. ನನ್ನ ಶರೀರದ ಕಾರ್ಶ್ಯವನ್ನೂ ವಿರಹವೇದನೆಯನ್ನೂ ನೋಡದೆ ಕೋಕಿಲೆಗಳು ಸ್ವೇಚ್ಛೆಯಿಂದ ಕೂಗುತ್ತ ಇನ್ನೂ ವೇದನೆಯನ್ನು ಉಂಟುಮಾಡುತ್ತಿವೆ. ನವಿಲುಗಳೂ ಗುಂಪುಗುಂಪಾಗಿ ಪರಸ್ಪರ ಸೇರಿ ಆಡುತ್ತಿವೆ. ಪಶುಗಳ ಸಂಘಗಳನ್ನು ಮೇಯಿಸಲು ನೀನು ಹೋಗುವ ಒಂದು ಹಗಲು ಅನೇಕ ಕಲ್ಪಗಳಾಗಿ ತೋರುತ್ತಿದೆ. ತಾವರೆಯಂತೆ ಇರುವ ನಿನ್ನ ಕಣ್ಣುಗಳು ನಮ್ಮನ್ನು ಸೀಳುವಂತೆ ಇವೆ. ಎಲೈ ಕೃಷ್ಣನೇ! ನೀನು ನಮ್ಮಲ್ಲಿ ಕೃಪೆಯನ್ನೇ ಮಾಡುವುದಿಲ್ಲ.

(೨) ತಕವಿಲ್ಲೈ ತಕವಿಲ್ಲೈಯೇ ನೀ ಕಣ್ಣಾ ತಡಮುಲೈ
ಪುಣರ್–ತೊಱುಮ್ ಪುಣರ್ಚ್ಚಿಕ್ಕಾರಾ,
ಶುಕವೆಳ್ಳಮ್ ವಿಶುಮ್ಬಿಱನ್ದಱಿವೈಮೂೞ್ಕ ಚೂೞ್ನ್ದದು
ಕನವೆನ ನೀಙ್ಗಿಯಾಙ್ಗೇ,
ಅಕವುಯಿರಕಮಕನ್ದೋಱುಮುಳ್‌ಪುಕ್ಕಾವಿಯಿಱ್
ಪರಮಲ್ಲವೇಟ್ಕೈಯಯರ್ವೇ,
ಮಿಕಮಿಕವಿನಿಯುನ್ನೈಪ್ಪಿರಿವೈಯಾಮಾಲ್ ವೀವ
ನಿನ್ ಪಶುನಿರೈ ಮೇಯ್ಕ್ಕಪ್ಪೋಕ್ಕೇ.

ಪ್ರ॥ ಕಣ್ಣಾ – ಕೃಷ್ಣನೇ !, ನೀತಕವಿಲ್ಲೈ – ನೀನು ಕೃಪೆಯುಳ್ಳವನಲ್ಲ, ತಕವಿಲ್ಲೈಯೇ – (ಯಾವಪ್ರಕಾರದಲ್ಲೂ) ಕೃಪೆಯುಳ್ಳವನಲ್ಲ. ತಡಮುಲ್ಲೈ-ದೊಡ್ಡ ಸ್ತನಗಳನ್ನು, ಪುಣರ್‌ತೋಱುಮ್ – ಆಲಿಂಗಿಸುವ ಸಮಯದಲ್ಲೆಲ್ಲಾ, ಪುಣರ್ ಚ್ಚಿಕ್ಕು – ಆ ಆಲಿಂಗನಕ್ಕೆ, ಆರಾ – ವಶ್ಯವಾಗದೆ ಹೆಚ್ಚಾಗಿ ಪ್ರವಹಿಸುವ, ಶುಕ ವೆಳ್ಳಮ್-ಆನನ್ದಪರೀವಾಹವು, ವಿಶುಮ್ಬು ಇಱನ್ದು-ಆಕಾಶವನ್ನೆಲ್ಲಾ ಮಿಾರಿ, ಅಱಿವೈಮೂಳ್ಕ – ಜ್ಞಾನವನ್ನೇ ಹೋಗಲಾಡಿಸುವಂತೆ, ಶೂಳ್‌ನ್ದು–ಸುತ್ತಲೂ ವ್ಯಾಪಿಸಿ, ಅದು ಕನವು ಎನ-ಅದು ಸ್ವಪ್ನವೋ ಎಂಬಂತೆ, ನೀಙ್ಗಿ–ನಷ್ಟವಾಗಿ, ಆಙ್ಗೇ–ಆ ಅವಸ್ಥೆಯಲ್ಲೇ, ಅಕವುಯಿರ್–ಒಳಗೆ ಇರುವ ಪ್ರಾಣವು, ಅಕಮ್ ಅಕಮ್ ತೋಱುಮ್ – ನಿಂತ ನಿಂತ ಸ್ಥಲಗಳಲ್ಲೆಲ್ಲಾ, ಉಳ್‌ಪುಕ್ಕು – ಒಳಗೆ ಪ್ರವೇಶಿಸಿ, ಆವಿಯ್ೞ–ಆಶ್ರಯವಾದ ಆತ್ಮನಿಗೆ, ಪರಮಲ್ಲ–ಸಹಿಸಲಾರದಂತೆ ಇದೆ. ಮಿಕಮಿಕ–ಮೇಲೆಮೇಲೆ, ಉನ್ನೈ – ನಿನ್ನನ್ನು, ಪಿರಿವೈಯಾಮಾಲ್ – ಅಗಲಿ ಇರೋಣವನ್ನು ನಾವು ಹೊಂದಿ ಇರುವಂತೆ, ವೇಟ್ಕೈ – ಆಶೆಯು ಹೆಚ್ಚುತ್ತಿದೆ. ಅನ್ದೋ–ಅಯ್ಯೋ !, ಇನಿ-ಇನ್ನುಮೇಲೆ, ನೀ–ನಿನ್ನ, ಪಶುನಿರೈ ಮೇಯ್‌ಕ್ಕ ಪ್ಪೋಕ್ಕೇ – ಹಸುಗಳನ್ನು ಮೇಯಿಸಲು ಹೋಗೋಣವು, ವೀವ – ನಿಂತು ಹೋಗಬೇಕು.

( ಸ–ಗಾ–ರ ॥ )—

ಕಾರುಣ್ಯಂ ತೇ ನ ಕೃಷ್ಣಾಸ್ತ್ಯಹಹ! ಸಹಿನಹಿ ಶ್ಲೇಷಕಾಲೇಽಪಿ ತೇ ಮೇ ವಕ್ಷೋಜದ್ವನ್ದ್ವಮೇತತ್ಪೃಥು ಭವತಿ! ಮಹಾನನ್ದಪಾಥೋಧಿರೇವಮ್ | ಆಕಾಶಂ ಚಾಪ್ಯತೀತ್ಯ ಭ್ರಮಯತಿ ಸುತರಾಂ ಬುದ್ಧಿಮೇವಂ ದಶಾ ಸ್ಯಾತ್ ಸ್ವಪ್ನಾವಸ್ಥಾ ಹಿ! ಜೀವಸ್ತ್ವವ ವಿರಹಸಹೋ ನೈವ ! ಗಾ ನಾನುಯಾಹಿ ||

ತಾ॥ ಎಲೈ ಕೃಷ್ಣನೇ! ನೀನು ಕೃಪೆಯುಳ್ಳವನಲ್ಲ. ನಮ್ಮ ಸ್ತನಗಳನ್ನು ನೀನು ಆಲಿಂಗಿಸುವಾಗ ಅವು ಇನ್ನೂ ದೊಡ್ಡವುಗಳಾಗಿ ಬೆಳೆಯುತ್ತ ಆನನ್ದಪರೀ ವಾಹವನ್ನು ಹೆಚ್ಚಿಸಿ ಸ್ವಪ್ನಪ್ರಾಯವಾಗಿ ಆ ಆನನ್ದವೂ ನಷ್ಟವಾಗುವಂತೆ ಮಾಡಿರುವುದರಿಂದ ಪ್ರಾಣವೇ ನಿಲ್ಲಲಾರದಂತೆ ಆಗಿ ಇದೆ. ನಿನ್ನ ವಿರಹದಿಂದ ಆಶೆಯು ಇನ್ನೂ ಹೆಚ್ಚುತ್ತಿದೆ. ಅಯ್ಯೋ! ಇನ್ನುಮೇಲೆ ನೀನು ಹಸುಗಳನ್ನು ಮೇಯಿಸಲು ಹೋಗಲೇಕೂಡದು.

(೩) ಪೀವನಿನ್ ಪಶುನಿರೈಮೇಯ್ಕ್ಕಪ್ಪೋಕ್ಕು
ವೆವ್ವುಯಿರ್ಕೊಣ್ಡೆನದಾವಿ ವೇವಾಲ್,
ಯಾವರುಮ್ ತುಣೈಯಿಲ್ಲೈ ಯಾನಿರುನ್ದುನ್ನಞ್ಜನ-
ಮೇನಿಯೈ ಯಾಟ್ಟವುಮ್ ಕಾಣೇನ್,
ಪೋವದನ್ತೊರುಪಕಲ್ ನೀಯಕನ್ರಾಲ್ ಪೊರುಕಯಲ್
ಕಣ್ಣಿಣೈ ನೀರುಮ್ ನಿಲ್ಲಾ,
ಶಾವದಿವಾಯ್ಕ್ಕುಲತ್ತಾಯ್ಚ್ಚಿಯೋಮಾಯ್ ಪ್ಪಿರನ್ದ
ಪಿತ್ತೊತ್ತುತ್ತೈಯೋಮ್ ತನಿಮೈ ತಾನೇ.

ಪ್ರ|| ನೀಪಶುನಿರೈ–ನಿನ್ನ ಪಶುಸಂಘವನ್ನು, ಮೇಯ್ಕ್ಕಪ್ಪೋಕ್ಕು–(ನೀನು) ಮೇಯಿಸುವುದಕ್ಕೆ ಹೋಗುವಾಗ, ಪೀರ್ವನ್–ನಾನು ನಾಶಹೊಂದುವೆನು. ವೆವ್ವುಯಿರ್ಕೊಣ್ಡು – ಉಷ್ಣವಾದ ಉಸುರುಬಿಟ್ಟು, ಎನದು ಆವಿ – ನನ್ನ ಆತ್ಮವು, ವೇಮ್ ಆಲ್ – ದಗ್ಧವಾಗುವುದು. ತುಣೈ – (ನನಗೆ) ಸಹಾಯಭೂತರು, ಯಾವರುಮ್ ಇಲ್ಲೈ–ಯಾರೂ ಇಲ್ಲ. ಯಾನ್ ಇರುನ್ದು–ನಾನು ಇದ್ದುಕೊಂಡು, ಉನ್ ಅಞ್ಜನಮೇನಿಯೈ – ನಿನ್ನ ನೀಲವಾದ ದಿವ್ಯಶರೀರವನ್ನು, ಆಟ್ಟವುಮ್ ಕಾಣೇನ್–ಸಂಚಾರದಲ್ಲಿ ಕಂಡಿಲ್ಲ. ನೀ ಅಕನ್ರಾಲ್ – ನೀನು ಹೊರಟುಹೋದರೆ, ಒರುಪಕಲ್–ಒಂದು ಹಗಲೂ, ಪೋವದು ಅನ್ರು – ಕಳೆಯುವುದೇ ಇಲ್ಲ. ಪೊರುಕಯಲ್ – ಪರಸ್ಪರ ಸ್ಪರ್ಧೆಯುಳ್ಳ ಮೀನುಗಳಂತೆ ಇರುವ, ಕಣ್ ಇಣೈ–ಕಣ್ಣುಗಳೆರಡೂ, ನೀರುಮ್ ನಿಲ್ಲಾ – ಸುರಿಯುವ ನೀರು ನಿಲ್ಲುವುದೇ ಇಲ್ಲ. ಇ ಆಯ್ ಕುಲತ್ತು–ಈ ಗೋಪಕುಲದಲ್ಲಿ, ಆಯ್ಚ್ಚಿಯೋಮಾಯ್ ಪಿರನ್ದ–ಗೋಪಿಗಳಾಗಿ ಹುಟ್ಟಿದ, ಪಿತ್ತುತ್ತೈಯೋಮ್ – ದೋಷವುಳ್ಳ ನಮ್ಮ, ಇ ತನಿಮೈ ತಾನೇ–ಈ ವಿಶ್ಲೇಷದಶೆಯು, ಶಾವದು–ನಷ್ಟವಾಗಬೇಕು.

( ಸ–ಗಾ–ರ || )—

ಧೇನೂನಾಂ ಪಾಲಕಃ ಲೀ ತವ ವಿರಹಶಹಾ ನಾಸ್ಮಿ ! ಸೀದಾಮಿ ! ಹನ್ತೋ–
ಚ್ಛ್ವಾಸೈಸ್ಸನ್ತಪ್ತಚಿತ್ತಾಽಸ್ಮ್ಯಹಹ! ನ ಹಿ ಸಹಾಯೋಽದ್ಯ ಮೇ
ನೀಲಮೂರ್ತೇ |
ಸಞ್ಚಾರಸ್ತೇ ನ ದೃಶ್ಯೋ ಮಮ ಭವತಿ! ದಿನಂ ಚೈಕಮೇವಂ ನ ಯಾತಿ !
ತ್ವದ್ವಿಶ್ಲೇಷೇಽಶ್ರುಪಾತೋ ನ ವಿರಮತಿ! ದಶಾಂ ತಾಮಿಮಾಂ
ಹನ್ತ ಗೋಪ್ಯಃ ||

ತಾ॥ ನೀನು ಪಶುಸಂಘವನ್ನು ಮೇಯಿಸುವುದಕ್ಕೆ ಹೋಗುವಾಗ ನಾನು ಬದುಕಲಾರದಂತೆ ಸನ್ತಾಪವನ್ನು ಹೊಂದುವೆನು. ನನ್ನ ಆತ್ಮವು ದಗ್ಧವಾಗುವುದು. ನನಗೆ ಸಹಾಯಭೂತರುಯಾರೂ ಇಲ್ಲ. ನಾನು ನಿನ್ನ ದಿವ್ಯಶರೀರದ ಸಂಚಾರವನ್ನು ಕಾಣದೆ ಒಂದು ಹಗಲನ್ನು ಕಳೆಯುವುದೇ ಕಷ್ಟವಾಗಿದೆ. ಮೀನುಗಳಂತೆ ಚಲಿಸುತ್ತಿರುವ ನನ್ನ ಕಣ್ಣುಗಳೆರಡೂ ಬಾಷ್ಪಭರಿತವಾಗಿರುವುದರಿಂದ ಕಣ್ಣುನೀರಿನ ಪ್ರವಾಹವು ನಿಲ್ಲುವುದೇ ಇಲ್ಲ. ಈ ಗೋಪಕುಲದಲ್ಲಿ ಗೋಪಿಗಳಾಗಿ ಹುಟ್ಟಿದ ನಮ್ಮ ಈ ವಿರಹವೇದನೆಯು (ನಷ್ಟವಾಗಬೇಕು) ನಿಂತುಹೋಗಬೇಕು

(೪) ತೊೞುತ್ತೈಯೋಮ್ ತನಿಮೈಯುಮ್ ತುಣೈಪಿರಿನ್ದಾರ್
ತುಯರಮುಮ್ ನಿನೈಕಿಲೈ ಗೋವಿನ್ದಾ, ನಿನ್
ತೊೞುತ್ತನಿಲ್ ಪಶುಕ್ಕಳೈಯೇ ವಿರುಪ್ಪಿತ್ತುಅನ್ಱೆಮ್ಮೈ-
ಯಿಟ್ಟುವಿಟ್ಟು ಮೇಯ್ಕ್ಕಪ್ಪೋದಿ,
ಪೞುತ್ತ ನಲ್ಲಮುದಿನಿನ್ ಶಾಱು ವೆಳ್ಳಮ್ ಪಾವಿಯೇನ್
ಮನಮಕಮ್ ತೋಱುಮುಳ್ಪು-
ಕ್ಕೞುತ್ತ, ನಿನ್ ಶೆಮ್ಬನಿವಾಯಿನ್ ಕಳ್ವಪ್ಪಣಿಮೊೞಿ
ನಿನೈತೊಱುಮಾವಿವೇಮಾಲ್.

ಪ್ರ॥ ಗೋವಿನ್ದಾ-ಗೋವಿನ್ದನೇ !, ತೊೞುತ್ತೈಯೋಮ್-ದಾಸಭೂತರಾದ ನಮ್ಮ, ತನಿಮೈಯುಮ್-ಬೇರೆ ಇರೋಣವನ್ನೂ (ವಿಶ್ಲೇಷವನ್ನೂ), ತುಣೈ-ಸಹಾಯಭೂತನಾದ ನಿನ್ನನ್ನು, ಪಿರಿನ್ದಾರ್ - ಅಗಲಿದವರು, ತುಯರಮುಮ್-ದುಃಖವನ್ನೂ, ನಿನೈಕಿಲೈ-(ನೀನು) ಸ್ಮರಿಸುವುದಿಲ್ಲ. ನಿನ್-ನಿನ್ನ, ತೊೞುತ್ತನಿಲ್-ಉದ್ಯೋಗದಲ್ಲಿ, ಪಶುಕ್ಕಳೈಯೇ ವಿರುಪ್ಪಿ - ಹಸುಗಳನ್ನೇ ಆದರಿಸಿ, ಎಮ್ಮೈ ತುಱನ್ದಿಟ್ಟು - ನಮ್ಮನ್ನು ಅನಾದರದಿಂದ ತ್ಯಜಿಸಿಬಿಟ್ಟು, ಅವೈ - ಅವುಗಳನ್ನು, ಮೇಯ್ಕ್ಕ-ಮೇಯಿಸುವುದಕ್ಕಾಗಿಯೇ, ಪೋದಿ-ಹೋಗುತ್ತಿದ್ದೀಯೆ. ಪೞುತ್ತ-ಪಕ್ವವಾದ, ನಲ್ ಅಮುದಿನ್ - ಶುದ್ಧವಾದ ಅಮೃತದ, ಇನ್ ಶಾಱುವೆಳ್ಳಮ್-ಭೋಗ್ಯವಾದ ರಸಪ್ರವಾಹವು, ಪಾವಿಯೇನ್ - ಪಾಪಿನಿಯಾದ ನನ್ನ, ಮನಮ್ ಅಕಮ್ ತೋಱುಮ್-ಮನಸ್ಸಿನ ಒಳಗೆಲ್ಲಾ, ಉಳ್ಪುಕ್ಕು - ಒಳಗೆ ಪ್ರವೇಶಿಸಿ, ಅೞುತ್ತ-ಸ್ಥಿರವಾಗಿ ನಿಲ್ಲುವಂತೆ ಮಾಡುವಾಗ, ನಿನ್-ನಿನ್ನ, ಶೆಮ್ ಕನಿವಾಯಿನ್-ಕೆಂಪಾದ ಪಕ್ವಫಲದಂತೆ ಇರುವ ಬಾಯಲ್ಲಿ, ಕಳ್ವ-ಕೃತ್ರಿಮವಾದ, ಪಣಿಮೊೞಿ-ದುಷ್ಟೋಕ್ತಿಗಳನ್ನು, ನಿನೈತೊಱುಮ್ - ಸ್ಮರಿಸಿದಹಾಗೆಲ್ಲಾ, ಆವಿ - (ನನ್ನ) ಪ್ರಾಣವು, ವೇಮಾಲ್-ಪರಿತಪ್ತವಾಗುತ್ತಿದೆ.

( ಸ-ಗಾ..ರ ॥ )—

ದಾಸೀನಾಂ ತೇ ದಶಾಂ ನಃ ಪೃಥಗಿಹ ವಿರಹೇ ಹನ್ತ! ನೈವ ಸ್ಮರೇಸ್ತ್ವಂ!
ಗೋವಿನ್ದೈವಂ ಪಶೂಂಸ್ತಾನನುಸರಸಿ ವನೇ ಹನ್ತ! ಮುಞ್ಚನ್ನಿಹಾಸ್ಮಾನ್ ।
ಮಾಯಾಸ್ವಾದೂಕ್ತಿ-ಸಾರಾಮೃತ-ಸರಿತಿ ಚ ತೇ ಮಾನಸಂ ಮೇಽಸ್ತಿ ಮಗ್ನಂ
ಪಾಪಿನ್ಯಾ ಹನ್ತ! ಹನ್ತ! ಸ್ಮೃತಮಪಿ ವಚನಂ ತೇ ದಹತ್ಯೇವ ಮೇಽಸೂನ್ ॥

ತಾ॥ ಎಲೈ ಗೋವಿನ್ದನೇ! ದಾಸಭೂತರಾದ ನಮ್ಮ ಈ ವಿರಹವೇದನೆಯನ್ನೂ ನೀನು ಸ್ಮರಿಸುವುದಿಲ್ಲ. ನಿನ್ನನ್ನು ಅಗಲಿದವರ ದುಃಖವನ್ನೂ ನೀನು ಸ್ಮರಿಸುವುದಿಲ್ಲ. ನೀನು ಪಶುಗಳನ್ನು ಮೇಯಿಸುವುದರಲ್ಲೇ ಆದರವಂ ಮಾಡಿ ನಮ್ಮನ್ನು ತ್ಯಜಿಸಿಬಿಟ್ಟು ಅವುಗಳೊಡನೆ ಹೋಗುತ್ತಿದ್ದೀಯೆ. ನಿನ್ನ ಅಮೃತ ಸದೃಶವಾದ ಮಾತುಗಳು ನಿನ್ನ ಬಿಂಬಾಧರದಿಂದ ಹೊರಡುವಾಗಲೆಲ್ಲಾ ವಂಚಕೋಕ್ತಿಗಳಾಗಿ ಪರಿಣಮಿಸುವುದರಿಂದ ಅವುಗಳ ಸ್ಮರಣವೂ ನನ್ನ ಪ್ರಾಣವನ್ನು ಸನ್ತಪ್ತವಾಗುವಂತೆ ಮಾಡುತ್ತಿದೆ.

(೫) ಪಣಿಮೊೞಿ ನಿನೈತೊಱುಮಾವಿವೇಮಾಲ್ ಪಕಲ್
ನಿರೈಮೇಯ್‌ಕ್ಕಿಯ ಪೋಯಕಣ್ಣಾ,
ಪಿಣಿಯವಿೞ್ ಮಲ್ಲಿಕೈವಾಡೈತೂವ
ಪೆರುಮದಮಾಲೈಯುಮ್ ವನ್ದಿನ್ಱಾಲೋ,
ಮಣಿಮಿಕುಮಾರ್ಪಿನಿಲ್ ಮುಲ್ಲೈಪ್ಪೋದೆಙ್ಗಳ್ ವನಮುಲೈ
ಕಮೞ್ವಿತ್ತುನ್ ವಾಯಮುದಮ್ ತನ್ದು,
ಅಣಿಮಿಕು ತಾಮರೈಕ್ಕೈಯೈಯನ್ದೋ ಅಡಿಚ್ಚಿಯೋಮ್
ತಲೈಮಿಸೈ ನೀಯಣಿಯಾಯ್.

ಪ್ರ॥ ಪಣಿಮೊೞಿ - ನಿನ್ನ ಸೂಕ್ತಿಗಳನ್ನು, ನಿನೈತೊಱುಮ್ – ಸ್ಮರಿಸಿದಾಗಲೆಲ್ಲಾ, ಆವಿವೇಮ್ – ಮನಸ್ಸು ಸನ್ತಪ್ತವಾಗುತ್ತಿದೆ. ಪಕಲ್ – ಹಗಲೆಲ್ಲಾ, ನಿರೈಮೇಯ್‌ಕ್ಕಿಯ – ಪಶುಗಳನ್ನು ಮೇಯಿಸುವುದಕ್ಕಾಗಿ, ಪೋಯ – ಹೋದ, ಕಣ್ಣಾ –ಕೃಷ್ಣನೇ!, ಪಿಣಿ-ಬನ್ಧನದಲ್ಲಿಸಿಕ್ಕಿ. ಅವಿೞ್–ವಿಕಸಿತವಾದ, ಮಲ್ಲಿಕೈ–ಮಲ್ಲಿಗೆಯಹೂಗಳನ್ನು, ವಾಡೈತೂವ – ವಾಯುವು ಉದುರಿಸಿದಾಗ, ಪೆರುಮದ – ಮಹಾಮದ (ದಿವ್ಯಪರಿಮಳ) ದೊಡನೆ, ಮಾಲೈಯುಮ್ – ಸನ್ಧ್ಯಾಕಾಲವೂ, ವನ್ದಿನ್ಱು–ಬಂದುಬಿಟ್ಟಿತು. ಮಣಿ–ಕೌಸ್ತುಭರತ್ನವು, ಮಿಕುಮ್–ಮಹಾಲಾವಣ್ಯದೊಡನೆ ಪ್ರಕಾಶಿಸುವ, ಮಾರ್ಪಿನಿಲ್–(ನಿನ್ನ) ವಕ್ಷಸ್ಥಲದಲ್ಲಿರುವ, ಮುಲ್ಲೈ

ಪ್ಪೋದು-ಮೊಲ್ಲೆಯಮೊಗ್ಗುಗಳು, ಎೞವನಮುಲ್ಯೈ-ನನ್ನ ರಮ್ಯವಾದ ಸ್ತನಗಳಲ್ಲಿ, ಕಮೞ್ವಿತ್ತು - ಪರಿಮಳಿಸುವಂತೆಮಾಡಿ, ಉೞ ವಾಯಮುದಮ್-ನಿನ್ನ ಅಧರಾಮೃತವನ್ನು, ತನ್ದು-ತಂದು, ಅಣಿಮಿಕು-ಅಲಂಕಾರದಿಂದ ಚೆನ್ನಾಗಿ ಭರಿತವಾಗಿರುವ, ತಾಮರೈ-ತಾವರೆಯಂತೆ ಇರುವ, ಕೈಯ್ಯೈ-(ನಿನ್ನ) ಹಸ್ತವನ್ನು, ಅಡಿಚ್ಚಿಯೋಮ್ ತಲೈಮಿಶೈ-ದಾಸಭೂತರಾದ ನಮ್ಮ ತಲೆಯಮೇಲೆ, ನೀ ಅಣಿಯಾಯ್-ನೀನು ಅಲಂಕಾರ ರೂಪವಾಗಿ ಇಡು ಅನ್ದೋ-ಅಯ್ಯೋ ! (ಈಪ್ರಕಾರ ನಾವು ಪ್ರಾರ್ಥಿಸಬೇಕೋ ?—ಎಂದು ಭಾವವು.)

( ಸ-ಗಾ-ರ || )—

ತ್ವತ್ಸ್ವಾದೂಕ್ತಿಸ್ಮೃತಿರ್ಮಾಂ ದಹತಿ ಬತ! ದಿನಂ ಕೃಷ್ಣ!ಗೋಘೋಷಕಾಲೇ<br>
ಮಲ್ಲೀಸೌಗನ್ಧ್ಯವಾತಾನ್ವಿತಮುದಯ! ಸಮಾಯಾತಿ ಸಾಯಂ ಚ ಸನ್ಧ್ಯಾ |<br>
ರತ್ನೋದ್ಭಾಸೇ ತವೋರಸ್ಯಭಿನವ ಎಟಚ್ಯೈಃ ಕುಟ್ಮಲೈರ್ವಾಸಿತಂ ಮೇ<br>
ಭೂಯಾದ್ವಕ್ಷೋಜಯುಗ್ಮಂ ತ್ವಧರಮಧುರಸೋ ಮೇಽಸ್ತು!<br>
ಹಸ್ತೋಽಸ್ತು ಮಸ್ತೇ ||

ತಾ|| ನಿನ್ನ ಮಧುರವಾದ ಸೂಕ್ತಿಗಳನ್ನು ಸ್ಮರಿಸಿದಾಗಲೆಲ್ಲಾ ನನ್ನ ಮನಸ್ಸು ಸನ್ತಪ್ತವಾಗುತ್ತಿದೆ. ಹಗಲೆಲ್ಲಾ ಪಶುಗಳನ್ನು ಮೇಯಿಸುವುದಕ್ಕೆ ಹೋದ ಕೃಷ್ಣನೇ ! ವಿಕಸಿತವಾದ ಮಲ್ಲಿಗೆಯಪುಷ್ಪಗಳನ್ನು ಗಾಳಿಯು ಉದುರಿಸಿದಾಗ ದಿವ್ಯಪರಿಮಳದೊಡನೆ ಮಹಾ ಮದಯುಕ್ತವಾದ ಸಂಧ್ಯಾಕಾಲವು ಬಂದುಬಿಟ್ಟಿತು ಕೌಸ್ತುಭರತ್ನದಿಂದ ಪ್ರಕಾಶಿಸುವ ನಿನ್ನ ವಕ್ಷಸ್ಥಲದಲ್ಲಿರುವ ಮೊಲ್ಲೆಯಮೊಗ್ಗುಗಳು ನನ್ನ ರಮ್ಯವಾದ ಸ್ತನಗಳಲ್ಲಿ ಪರಿಮಳಿಸುವಂತೆ ಮಾಡಿ, ನಿನ್ನ ಅಧರಾಮೃತವನ್ನು ತಂದು, ಅಲಂಕಾರಭರಿತವಾದ ನಿನ್ನ ಪದ್ಮಹಸ್ತವನ್ನು ನಿನ್ನ ದಾಸಿಯಾದ ನನ್ನ ತಲೆಯಮೇಲೆ ಭೂಷಣವಾಗಿ ಇಟ್ಟು ಅನುಗ್ರಹಿಸು. (ಇದನ್ನು ನಾನು ಪ್ರಾರ್ಥಿಸಬೇಕೋ ? ಅಯ್ಯೋ! ನಿನಗೆ ತಿಳಿಯದೋ ನಿನ್ನ ಕರ್ತವ್ಯವು!)

(೬) ಅಡಿಚ್ಚಿಯೋನ್ತಲೈಮಿಶೈ ನೀಯಣಿಯಾಯ್<br>
ಆೞಿಯಙ್ಗಣ್ಣಾ ಉೞ್ಕೋಲಪ್ಪಾದಮ್,<br>
ಪಿಡಿತ್ತದು ನಡುವುನಕ್ಕರಿನ್ದಯುರುಮ್ ಪಲರದುನಿಱ್ಕ<br>
ಪೆಮ್ಪೆಣ್ಣ್ರೈಯಾಕ್ಷ್ರೋಮ್,<br>
ವಡಿತ್ತಡಮ್ ಕಣ್ಣಿಣ್ಯೈ ನೀರುಪ್ಪನಿಲ್ಲಾ ಮನಮುಮ್-<br>
ನಿಲ್ಲಾ ವೆಮಕ್ಕದುತನ್ನಾಲೇ,<br>
ವೆಡುಪ್ಪು ನಿೞಪಶುನಿರೈ ಮೇಯಪ್ಪೋಕ್ಕು<br>
ವೇಮೆಮದುಯಿರೞಲ್ ಮೆಱುಕಿಲುಕ್ಕೇ.

ಪ್ರ॥ ಆೞಿ-ಸಮುದ್ರದಂತೆ, ಅಮ್-ರಮ್ಯವಾದ, ಕಣ್ಣಾ - ಕಣ್ಣುಗಳುಳ್ಳವನೇ ! (ನೀಲವರ್ಣನಾದ ಕೃಷ್ಣನೇ!), ಉ೯ ಕೋಲಪ್ಪಾದಮ್-ನಿನ್ನ ಸುನ್ದರವಾದ ಪಾದಗಳನ್ನು, ಅಡಿಚ್ಚಿಯೋಮ್ ತಲೈಮಿಶೈ-ಅನನ್ಯಾರ್ಹಗಳಾದ ನಮ್ಮ ತಲೆಯಮೇಲೆ, ನೀ ಅಣಿಯಾಯ್-ನೀನು ಅಲಂಕಾರವಾಗಿ ಇಡು. ನಡುವು-ನಿನ್ನ ಕಾರ್ಯದನಡುವೆ, ಅದುಪಿಡಿತ್ತು-ಆ ಪಾದಗಳನ್ನು ಆಶ್ರಯಿಸಿ, ಅರಿವೈಯರುಮ್ - ತಮ್ಮ ಮಹಿಮೆಯುಳ್ಳವರೂ, ಉನಕ್ಕು-ನಿನಗೆ, ಪಲರ್-ಅನೇಕರು ಇರುವರು. ಅದುನಿಱ್ಕ-ಅದೂ ಇರುವಲ್ಲಿ, ಎಮ್ ಪೆಣ್ಮೈ ಆಱ್ಱೋಮ್ - ನಮ್ಮ ಸ್ತ್ರೀತ್ವವನ್ನೇ ಸಹಿಸಲಾರೆವು (ಜೀವಿಸಲಾರೆವು). ವಡಿ-ತೀಕ್ಷ್ಣವಾದ, ತಡಮ್-ವಿಶಾಲವಾದ, ಕಣ್ಣಿಣೈ - (ನಮ್ಮ) ನೇತ್ರಯುಗ್ಮದಲ್ಲಿ, ನೀರುಮ್ ನಿಲ್ಲಾ-ನೀರೂ ನಿಲ್ಲುವುದಿಲ್ಲ. ಮನಮುಮ್‌ನಿಲ್ಲಾ-ಮನಸ್ಸೂ ಸ್ಥಿರವಾಗಿ ನಿಲ್ಲುವುದಿಲ್ಲ. ಅದುತನ್ನಾಲೇ-ಅದುದರಿಂದ, ಎಮಕ್ಕು-ನಮಗೆ, ನೀ-ನಿನ್ನ, ಪಶುನಿರೈಮೇಯ್‌ಕ್ಕಪ್ಪೋೞ್ಕ್ಕು-ಪಶುಸಂಘವನ್ನು ಮೇಯಿಸಲು ಹೋಗೋಣವು, ವೆಡಿಪ್ಪು-ಉದ್ವೇಗಕರವಾಗಿದೆ (ಅಸಹ್ಯವಾಗಿದೆ). ಎಮದುಯಿರ್-ನಮ್ಮ ಆತ್ಮಾ, ಅೞಲ್-ಅಗ್ನಿಯಲ್ಲಿ, ಮೆೞುಕಿಲ್-ಮೇಣದಂತೆ, ಉಕ್ಕು-ಕರಗಿ, ವೇಮ್-ಕುದಿಯುತ್ತಿದೆ.

( ಸ-ಗಾ-ರ ॥ )—

ಗಮ್ಭೀರಾಮ್ಭೋಧಿನೇತ್ರ! ಸ್ವಯಮಿಹ ಚರಣೌ ತೇ ಕುರುಷ್ವೋತ್ತಮಾಙ್ಗೇ

ತ್ವಸ್ಮಾಕಂ ಕೃಷ್ಣ ! ಕಾನ್ತಾಸ್ತವ ಕಿಲ ಪರಿತಸ್ತತ್ರ ಸನ್ತ್ಯೇವ ಬಹ್ವ್ಯಃ ।

ಸ್ತ್ರೀತ್ವಂ ಹಾ! ದುಸ್ಸಹಂ ನಃ ಕಿಲ ನಯನಯುಗಂ ತ್ವಶ್ರುಪೂರ್ಣಂ !

ಮನಶ್ಚ

ಭ್ರಾನ್ತಂ! ನಶ್ಚೇ ಪಶೂನಾಮನುಗಮನಮಹೋ! ದುಸ್ಸಹಂ! ತಪ್ತ ಆತ್ಮಾ॥

ತಾ॥ ಗಮ್ಭೀರವಾದ ಸಮುದ್ರದಂತೆ ರಮ್ಯವಾದ ನೇತ್ರಗಳುಳ್ಳವನೇ! (ನೀಲವರ್ಣನಾದ ಶ್ರೀಕೃಷ್ಣನೇ !) ನಿನ್ನ ಸುನ್ದರವಾದ ಪಾದಗಳನ್ನು ದಾಸಿಗಳಾದ ನಮ್ಮ ತಲೆಯಮೇಲೆ ನೀನು ಅಲಂಕಾರವಾಗಿ ಇಡು. ನಿನ್ನ ಪಾದಗಳನ್ನು ಆಶ್ರಯಿಸಿ ಮಹನೀಯರಾದವರು ಅನೇಕರು ಇರುವರು. ನಮ್ಮ ಸ್ತ್ರೀತ್ವವನ್ನೇ ನಾವು ಸಹಿಸಲಾರೆವು. ನಮ್ಮ ವಿಶಾಲವಾದ ನೇತ್ರಗಳಲ್ಲಿ ನೀರು ನಿಲ್ಲುವುದೇ ಇಲ್ಲ. ನಮ್ಮ ಮನಸ್ಸೂ ಸ್ಥಿರವಾಗಿ ನಿಲ್ಲುವುದಿಲ್ಲ. ಆದುದರಿಂದ ನೀನು ಪಶುಗಳನ್ನು ಮೇಯಿಸಲು ಹೋಗೋಣವು ನಮಗೆ ದುಸ್ಸಹವಾಗಿದೆ. ನಮ್ಮ ಆತ್ಮಾ ಬೆಂಕಿಯಲ್ಲಿ ಮೇಣದಂತೆ ಕರಗಿ ಕುದಿಯುತ್ತಿದೆ.

(೭) ವೇಮೆಮದುಯಿರೞಲ್ ಮೆೞುಕಿಲುಕ್ಕು ವೆಳ್ವಳೈ ಮೇಕಲೈ
ಕೞನ್ಱು ವೀೞ,
ತೂಮಲರ್ ಕಣ್ಣಿಣೈ ಮುತ್ತಮ್ ಶೋರ ತುಣೈಮುಲೈ
ಪಯನ್ದನ ತೋಳ್ಕಳ್ ವಾಡ,
ಮಾಮಣಿವಣ್ಣಾ ಉನ್ ಶೆಙ್ಗಮಲವಣ್ಣ ಮೆನ್ ಮಲರಡಿ-
ನೋವ ನೀಪೋಯ್,
ಆಮಕಿೞ್ನ್ದುಕನ್ದವೈ ಮೇಯ್ಕ್ಕಿನ್ಱುನ್ನೊಡು ಅಶುರರ್ಕಳ್
ತಲೈಪ್ಪೆಯ್ಯಿಲ್ ಯವಙ್ಕೊಲಾಙ್ಗೇ.

ಪ್ರ॥ ವೆಳ್‌ವಳೈ-ಬೆಳ್ಳಗೆ ಇರುವ ಕೈಬಳೆಗಳೂ, ಮೇಕಲೈ-ಒಡ್ಯಾಣವೂ, ಕೞನ್ಱುವೀೞ-ಸಡಿಲವಾಗಿ ಬಿಳುವಂತೆಯೂ, ತೂಮಲರ್-ಪರಿಶುದ್ಧವಾದ ತಾವರೆ ಹೂವಿನಂತೆ ಇರುವ, ಕಣ್ಣಿಣೈ-ಕಣ್ಣುಗಳೆರಡೂ, ಮುತ್ತಮ್‌ಶೋರ - ಶೋಕಾಶ್ರುಬಿನ್ದುಗಳನ್ನು ಸುರಿಸುವಂತೆಯೂ, ತುಣೈಮುಲೈ-ಎರಡು ಸ್ತನಗಳೂ, ಪಯನ್ದು-ವಿವರ್ಣವಾಗಿ, ಎನತೋಳ್‌ಕಳ್ -- ನನ್ನ ತೋಳುಗಳು, ವಾಡ - ಶುಷ್ಕವಾಗುವಂತೆಯೂ, ಮಾಮಣಿವಣ್ಣಾ-ಶ್ಲಾಘ್ಯ ನೀಲಮಣಿವರ್ಣನೇ, ಶೆಙ್ಗಮಲವಣ್ಣ - ಕೆಂದಾವರೆಯಂತೆ ರಮ್ಯವಾದ, ಮೆನ್ ಮಲರ್ - ಮೃದುವಾದ ಪುಷ್ಪದಂತೆ ಇರುವ, ಉನ್ ಅಡಿ-ನಿನ್ನ ಪಾದಗಳು, ನೋವ -- ನೋಯುವಂತೆ, ನೀಪೋಯ್ - ನೀನು ಹೋಗಿ, ಆ - ಪಶುಗಳವಿಷಯದಲ್ಲಿ, ಮಕಿೞ್ನ್ದು ಉಕನ್ದು - ಅತ್ಯಾದರದಿಂದ ಸನ್ತುಷ್ಟನಾಗಿ, ಅವೈಮೇಯ್‌ಕಿನ್ಱು - ಅವುಗಳನ್ನು ಮೇಯಿಸುವ ಸ್ಥಲದಲ್ಲಿ, ಉನ್ನೋಡು-ನಿನ್ನೊಡನೆ, ಅಶುರರ್‌ಕಳ್-ರಾಕ್ಷಸರು, ತಲೈಪ್ಪೆಯ್ಯಿಲ್ - ಬಂದರೆ, ಆಙ್ಗು-ಅಲ್ಲಿ, ಯವಙ್ಕೊಲ್ - ಏನಾಗುವುದೋ ಎಂದು, ಎಮದು ಉಯಿರ್ - ನಮ್ಮ ಆತ್ಮ, ಅೞಲ್‌ಮೆೞುಕಿಲ್ - ಬೆಂಕಿಯಲ್ಲಿಟ್ಟ ಮೇಣದಂತೆ, ಉಕ್ಕು-ಕರಗಿ, ವೇಮ್-ತಪ್ತವಾಗುವುದು.

( ಸ-ಗಾ-ರ ॥ )—
ಶೈಥಿಲ್ಯಂ ಯಾನ್ತಿ ಕಾಂಚ್ಯಙ್ಗದ-ವಲಯ ಮುಖಾನ್ಯದ್ಯ! ನೇತ್ರಾಬ್ಜಯುಗ್ಮಂ
ರಮ್ಯಂ ಬಾಷ್ಪಾಮ್ಬುಪೂರ್ಣಂ ! ಸ್ತನಯುಗಮಪಿ ಮೇ ಹನ್ತ ಹಾ !
ಶುಷ್ಯತೀದಮ್ ।
ಬಾಹೂ ಚೈತೌ ಕೃಶೌ ಮೇ! ಮಣಿನಿಭ! ತವ ದಿವ್ಯಾಂಘ್ರಿಪದ್ಮದ್ವಯಂ ಚ
ಕ್ಲಿನ್ನಂ ಸ್ಯಾತ್ಕಾನನೇ! ತ್ವಂ ಪಶುಗಣಮನುಯಾಸ್ಯಾಸುರೈಃ ಕಿಂ ಭವೇದ್ವಾ?॥

ತಾ|| ನಮ್ಮ ಕೈಬಳೆಗಳೂ ಒಡ್ಯಾಣವೂ ಸಡಿಲವಾಗಿ ಕೆಳಗೆ ಬೀಳುವಂತೆ ಇವೆ ನಮ್ಮ ಕಣ್ಣುಗಳೆರಡೂ ನೀರುತುಂಬಿ ಪ್ರವಹಿಸುತ್ತಿವೆ. ಸ್ತನಗಳೆರಡೂ ವಿವರ್ಣವಾಗಿ ಹೋಗಿವೆ. ನಮ್ಮ ತೋಳುಗಳು ಬಾಡಿಹೋಗಿವೆ. ಎಲೈ ನೀಲಮಣಿ ವರ್ಣನೇ! ಸುಕುಮಾರವಾದ ನಿನ್ನ ಪಾದಾರವಿನ್ದಗಳು ನೋಯುವಂತೆ ನೀನು ನಡೆದುಹೋಗಿ ಪಶುಗಳ ವಿಷಯದಲ್ಲಿ ಅತ್ಯಾದರದಿಂದ ಅವುಗಳನ್ನು ಮೇಯಿಸಲು ಹೋದರೆ ಅಲ್ಲಿ ರಾಕ್ಷಸರು ಬಂದರೆ ನಿನಗೆ ಏನು ಅಪಾಯವು ಸಂಭವಿಸುವುದೋ— ಎಂದು ನಮ್ಮ ಆತ್ಮಾ ಬೆಂಕಿಯಲ್ಲಿಟ್ಟ ಮೇಣದಂತೆ ಕರಗಿ ತಪ್ತವಾಗುವುದು.

(೮) ಅಶುರರ್‌ಕಳ್ ತಲೈಪ್ಪೆಯ್ಯಿಲ್ ಯಾವಙ್ಗೊಲಾಙ್ಗೆನ್ರು—
ಮೆನ್ನಾರುಯಿರಾರ್ ಪಿಙ್ಪೋಕೇಲ್,
ಕಶಿಕೈಯುಮ್ ವೇಟ್ಕೈಯುಮುಳ್‌ಕಲನ್ದು ಕಲವಿಯುಮ್
ನಲಿಯುಮೆಙ್ ಕೈಕಳಿಯೇಲ್,
ವಶಿಶೆಯುಙ್ ತಾಮರೈಕ್ಕಣ್ಣುಮ್ ವಾಯುಮ್
ಕೈಕಳುಮ್ ಪೀತಕವುಡೈಯುಮ್ ಕಾಟ್ಟಿ,
ಒಶಿಶೆಯ್‌ನುಣ್ಣಿಡೈ ಯಿಳವಾಯ್‌ಚ್ಚಿಯರ್ ನೀಯುಕಕ್ಕು
ನಲ್ಲವರೊಡುಮುಳಿತರಾಯೇ.

ಪ|| ಅಶುರರ್‌ಕಳ್—ರಾಕ್ಷಸರು, ತಲೈಪ್ಪೆಯ್ಯಿಲ್ – ಬಂದು ಸಮೀಪಿಸಿದರೆ, ಯಾವಙ್ಗೊಲಾಙ್ಗು—ಅಲ್ಲಿ ಏನು ಪ್ರಮಾದವು ಸಂಭವಿಸುವುದೋ, ಎನ್ರು—ಎಂದು, ಎಙ್ ಆರುಯಿರ್-ನನ್ನ ಆತ್ಮಾ, ಅಲ್ಲುಮ್—ಕ್ಲೇಶಾಬ್ಧಿಮಗ್ನವಾಗುವುದು. (ಆದುದರಿಂದ) ಆಙ್ಪಿಙ್ ಪೋಕೇಲ್-(ನೀನು) ಹಸುಗಳಹಿಂದೆ ಹೋಗಬೇಡ. (ಮತ್ತು) ಕಶಿಕೈಯುಮ್—ಸಂಶ್ಲೇಷದಲ್ಲಿ ಆದರವೂ, ವೇಟ್ಕೈಯುಮ್ – ಆಶೆಯೂ, ಕಲವಿಯುಮ್ – ಸಂಶ್ಲೇಷಭೋಗವೂ, ಉಳ್‌ಕಲನ್ದು – ನನ್ನ ಮನಸ್ಸಿನಲ್ಲಿ ಸೇರಿ, ನಲಿಯುಮ್ – ಹಿಂಸಿಸುತ್ತಿವೆ. ಎಙ್‌ಕೈಕಳಿಯೇಲ್ – ನನ್ನ ಕೈಬಿಟ್ಟು ನೀನು ಹೋಗಕೂಡದು. ವಶಿಶೆಯ್ – ವಶೀಕರಿಸುವ, ಉಙ-ನಿನ್ನ, ತಾಮರೈ—ತಾವರೆಯಂತೆ ಇರುವ, ಕಣ್ಣುಮ್ ವಾಯುಮ್ ಕೈಕಳುಮ್—ನೇತ್ರ ವಕ್ತ್ರಹಸ್ತಗಳನ್ನೂ, ಪೀತಕವುಡೈಯುಮ್ – ಪೀತಾಮ್ಬರದ ಸೌನ್ದರ್ಯವನ್ನೂ, ಕಾಟ್ಟಿ—ತೋರಿಸಿ, ಒಶಿ

ಶಿಯ್–(ನನಗೆ) ಶಾನ್ತಿಯನ್ನು ಉಂಟುಮಾಡುತ್ತ, ನುಣ್ಣಿಡೈ–ಕೃಶವಾದ ಮಧ್ಯವುಳ್ಳ, ಇಳ ಆಯ್ಚ್ಚಿಯರ್–ಮುಗ್ಧರಾದ ಗೋಪಿಗಳಾದ, ನೀ ಉಕಕ್ಕುಮ್ – ನಿನಗೆ ಭೋಗ್ಯವಾಗಿರುವ, ನಲ್ಲವರೊಡು – ಒಳ್ಳೆಯವರೊಡನೆ, ಉೞಿತರಾಯೇ– ಸಂಚರಿಸು.

( ಸ–ಗಾ–ರ || )—

ಆಯಾತಾ ರಾಕ್ಷಸಾಶ್ಚೇತ್ಕಥಮಹಹ! ಭವೇದಿತ್ಯಹಂ ಹನ್ತ! ಚಿನ್ತಾ–
ಪಾರಾವಾರೇಽಸ್ಮಿ ಮಗ್ನಾ! ಪಶುಗಣಮನು ನ್ಮೈವಾದ್ಯ ಯಾಹೀತಿ ವಚ್ಮಿ|
ಆಶಾಪಾಶಾಭಿಸನ್ಧಿ–ಪ್ರಯತನ–ರತಯಶ್ಚಾರ್ತಿಮೂಲಂ ಮಮಾದ್ಯ !
ತ್ವಂ ಮೇ ಹಸ್ತಸ್ಥಿತಸ್ಸನ್ಸ್ಯಃ! ಪುರತ ಇಹ ಚರೇರ್ಗೋಪಿಕಾಭಿಃ ಪ್ರಿಯಾಭಿಃ||

ತಾ|| ರಾಕ್ಷಸರು ನಿನ್ನ ಸಮೀಪಕ್ಕೆ ಬಂದರೆ ನಿನಗೆ ಏನು ಅಪಾಯವು ಸಂಭವಿಸುವುದೋ—ಎಂದು ನನ್ನ ಆತ್ಮಾ ಕ್ಲೇಶಾಮ್ಬುಧಿ ಮಗ್ನವಾಗುವುದು. ಆದುದರಿಂದ ನೀನು ಪಶುಗಳ ಹಿಂದೆ ಹೋಗಬೇಡ. ಸಂಶ್ಲೇಷದಲ್ಲಿ ಆದರವೂ ಆಶೆಯೂ ಭೋಗವೂ ನನ್ನ ಮನಸ್ಸಿನಲ್ಲಿ ಸೇರಿ ಪೀಡಿಸುತ್ತಿವೆ. ಆದುದರಿಂದ ನನ್ನ ಕೈ ಬಿಟ್ಟು ನೀನು ಹೋಗಕೂಡದು. ಕಮಲಗಳಂತೆ ಇರುವ ನಿನ್ನ ನೇತ್ರ ವಕ್ತ್ರ ಹಸ್ತಗಳನ್ನೂ ಪೀತಾಮ್ಬರದ ಸೌನ್ದರ್ಯವನ್ನೂ ತೋರಿಸಿ ನನಗೆ ಆರ್ತಿಯನ್ನು ಉಂಟುಮಾಡುತ್ತ—ನಿನಗೆ ಭೋಗ್ಯರಾಗಿರುವ ಕೃಶಮಧ್ಯೆಗಳಾದ ಗೋಪಿಗಳೊಡನೆ ನೀನು ಸಂಚರಿಸು.

(೯) ಉಕಕ್ಕು ನಲ್ಲವರೊಡುಮುೞಿತನ್ದುಉನ್ಱನ್ ತಿರುವುಳ್ಳಮಿಡರ್
ಕೆಡುಮ್ ತೋಱುಮ್, ನಾಙ್ಗಳ್
ವಿಯಕ್ಕ ವಿನ್ಬುಱುದುಮೆಮ್ ಪೆಣ್ಮೈಯಾಱ್ಱೋ–
ಮೆಮ್ಬೆರುಮಾನ್ ಪಶುಮೇಯ್ಕ್ಕ ಪ್ಪೋಕೇಲ್,
ಮಿಕಪ್ಪಲವಶುರರ್ಕಳ್ ವೇಣ್ಡುರುವಙ್ಕೊಣ್ಡು
ನಿನ್ಱುೞಿತರುವರ್ ಕಞ್ಜನೇವ,
ಅಕಪ್ಪಡಿಲವರೊಡುಮ್ ನಿನ್ನೊಡಾಙ್ಗೇ ಯವತ್ತಙ್ಗಳ್
ವಿಳೈಯುಮೆನ್ ಶೊಱ್ಕೊಳನ್ದೋ.

ಪ್ರ॥ ಉಕಕ್ಕುಮ್–ನೀನು ಆದರಿಸುವ, ನಲ್ಲವರೊಡುಮ್ – ಒಳ್ಳೇ ಸ್ತ್ರೀ ಜನರೊಡನೆ, ಉಱೈತನ್ದು–ಸಂಚರಿಸಿ, ಉೞ್ತೀತಿರುವುಳ್ಳಮ್–ನಿನ್ನ ಹೃದಯದಲ್ಲಿ ಉಂಟಾದ, ಇಡರ್ ಕೆಡುಮ್ ತೋೞುಮ್-ದುಃಖವು ತೀರುವಾಗಲೆಲ್ಲಾ, ನಾಙ್ಗಳ್-ನಾವು, ವಿಯಕ್ಕ–ಅಧಿಕವಾಗಿ, ಇನ್ಬುೞುದುಮ್–ಸನ್ತೋಷಪಡುವೆವು. ಎಮ್ ಪೆಣ್ಮೈ–ನಮ್ಮ ಸ್ತ್ರೀತ್ವವನ್ನು, ಆಱ್ಱೋಮ್–ಸಹಿಸಲಾರೆವು. ಎಮ್ಬೆರುಮಾನೇ–ನಮ್ಮ ಸ್ವಾಮಿಯೇ!, ಪಶುಮೇಯ್‌ಕ್ಕ ಪೋಕೇಲ್-ಹಸುಗಳನ್ನು ಮೇಯಿಸುವುದಕ್ಕೆ ಹೋಗಬೇಡ. ಕಞ್ಜನ್ ಏವ – ಕಂಸನ ಪ್ರೇರಣೆಯಿಂದ, ಪಲ ಅಸುರರ್‌ಕಳ್–ಅನೇಕ ರಾಕ್ಷಸರು, ವೇಣ್ಡುರುವಮ್ ಕೊಣ್ಡು – (ಕಾಮರೂಪಿಗಳಾದುದರಿಂದ) ನಿನಗೆ ಇಷ್ಟವಾದ ವಂಚಕರೂಪಗಳನ್ನು ಧರಿಸಿ, ಮಿಕ – ಪ್ರಬಲವಾಗಿ, ನಿನ್ಱು ಉಱೈತರುವರ್–ಅಲ್ಲಲ್ಲಿ ನಿಂತು ಸಂಚರಿಸುವರು. ಅಕಪ್ಪಡಿಲ್ – ಕೈಗೆ ಸಿಕ್ಕಿದರೆ, ಅವರೊಡು–ಅವರೊಡನೆಯೂ, ನಿನ್ನೊಡು-ನಿನ್ನೊಡನೆಯೂ, ಆಙ್ಗೇ–ಅಲ್ಲಿಯೇ, ಅವತ್ತಙ್ಗಳ್–ಅವದ್ಯಕರವಾದ ಕೂಟಯುದ್ಧಗಳು, ವಿಳೈಯುಮ್–ಬೆಳೆಯುವುವು. ಎನ್ ಶೊಲ್-ನನ್ನ ಮಾತನ್ನು, ಕೊಳ್–ಅಂಗೀಕರಿಸು. ಅನ್ದೋ – ಅಯ್ಯೋ!

( ಸ-ಗಾ-ರ ॥ )—

ಪ್ರೀತಾಭಿಃ ಕಾಮಿನೀಭಿರ್ಯದಿ ಚರಸಿ ಸುಖಂ ಪ್ರಾಪ್ಸ್ಯಸೇ ವೀತದುಃಖ–
ಸ್ತ್ವಂ ಮೇ ನಾಥ! ಪ್ರಿಯಂ ಮೇ ಮಹದಿತಿ ವಿದಿತಂ! ಮಾಽಸ್ತು
ಮೇ ಸ್ತ್ರೀತ್ವದೋಷಃ ।
ವಿಶ್ಲೇಷೋ ದುಸ್ಸಹೋ ಮೇ ಪಶುಗಣಮನು ಮಾಯಾಹಿ! ಕಂಸೇರಿತೈಸ್ತೇ
ನಾನಾಯುದ್ಧಾನಿ ಚ ಸ್ಯುರ್ನಿಶಿಚರನಿವಹೈರ್ಹನ್ತ!
ಮೇಽನುವೃಜೋಕ್ತಿಮ್ ॥

ತಾ॥ ನೀನು ಆದರಿಸುವ ಒಳ್ಳೇ ಸ್ತ್ರೀಜನರೊಡನೆ ನೀನು ಸಂಚರಿಸಿ, ನಿನ್ನ ಹೃದಯದಲ್ಲಿದ್ದ ದುಃಖವು ತೀರುವಾಗಲೆಲ್ಲಾ ನಾವು ಬಹು ಸನ್ತೋಷಪಡುವೆವು. ನಾವು ನಮ್ಮ ಸ್ತ್ರೀತ್ವವನ್ನು ಸಹಿಸಲಾರೆವು. ನಮ್ಮ ಸ್ವಾಮಿಯೇ! ಹಸುಗಳನ್ನು ಮೇಯಿಸುವುದಕ್ಕೆ ನೀನು ಹೋಗಬೇಡ. ಕಂಸನ ಪ್ರೇರಣೆಯಿಂದ ಅನೇಕ ರಾಕ್ಷಸರು ಮಾಯಾವೇಷಗಳನ್ನು ಧರಿಸಿ ಅಲ್ಲಲ್ಲಿ ಸಂಚರಿಸುವರು. ಕೈಗೆ ಸಿಕ್ಕಿದರೆ ಅವರಿಗೂ ನಿನಗೂ ಘೋರಯುದ್ಧಗಳು ಸಂಭವಿಸುವುವು. ನನ್ನ ಮಾತನ್ನು ಕೇಳು. ಅಯ್ಯೋ! (ನೀನು ಎಲ್ಲೂ ಹೋಗಬೇಡ.)

(೧೦) ಆವತ್ತಙ್ಗಳ್ ವಿಳೈಯುಮೆನ್ ಶೊಱ್ಕೊಳನ್ಱೋ
ಅಶುರರ್ಕಳ್ ವನ್ಕೈಯರ್ ಕಞ್ಜನೇವ,
ತವತ್ತವರ್ ಮಱುಕನಿನ್ಱುೞಿತರುವರ್ ತನಿಮೈಯುಮ್
ಪೆರಿದುನಕ್ಕಿರಾಮನೈಯುಮ್,
ಉವರ್ತ್ತಲೈ, ಉಡನ್ತಿರಿಕಿಲೈಯುಮೆನ್ಱೆನ್ಱೂಡುೞಿ
ನೆನ್ನುಡೈ ಯಾವಿವೇವಾಲ್,
ಶಿವತ್ತಿಲುಮ್ ಪಶುನಿರೈಮೇಯ್ಪ್ಪುಕತ್ತಿ
ಶೆಙ್ಕನಿವಾಯೆಙ್ಗಳಾಯರ್ತೇವೇ.

ಪ್ರ|| ಶೆಙ್ಕನಿವಾಯ್ - ಕೆಂಪಾದ ಬಿಂಬಾಧರವುಳ್ಳ, ಎಙ್ಗಳ್ - ನಮ್ಮ, ಆಯರ್ ತೇವೇ - ಗೋಪಕುಲನಾಥನೇ!, ವನ್ಕೈಯರ್ - ಪ್ರಬಲಹಸ್ತರಾದ, ಅಶುರರ್ಕಳ್-ರಾಕ್ಷಸರು, ಕಞ್ಜನೇವ-ಕಂಸನ ಪ್ರೇರಣೆಯಿಂದ ಬರುತ್ತಿರುವುದರಿಂದ, ತವತ್ತವರ್-ತಪಸ್ವಿಗಳಾದ ಋಷಿಗಳು, ಮಱುಕ-(ನಿನಗೇನು ಅಪಾಯವು ಬರುವುದೋ ಎಂದು) ಮನಃಕ್ಷೋಭದಿಂದ, ನಿನ್ಱು ಉೞಿತರುವರ್-ಅಲ್ಲಲ್ಲಿ ನಿಂತು ಸಂಚರಿಸುತ್ತಿರುವರು. ಉನಕ್ಕು-ನಿನಗೆ, ತನಿಮೈಯುಮ್ - ನಿಸ್ಸಹಾಯತ್ವವು, ಪೆರಿದು-ಅಧಿಕವಾಗಿಯೇ ಇದೆ. ಇರಾಮನೈಯುಮ್-ಪ್ರಬಲನಾದ ನಿನ್ನ ಅಣ್ಣನಾದ ಬಲರಾಮನನ್ನೂ, ಉವರ್ತ್ತಲೈ - (ನೀನು) ಬಿಟ್ಟು ಇರೋಣದರಿಂದ, ಉಡನ್ತಿರಿಕಿಲೈಯುಮ್-ಅವನೊಡನೆ ಸಂಚರಿಸುವುದೂ ಇಲ್ಲ. (ಆದುದರಿಂದ) ಆವತ್ತಙ್ಗಳ್-ಅಪಾಯಗಳು, ವಿಳೈಯುಮ್ - ಸಂಭವಿಸುವುವು. ಎನ್ಱು ಎನ್ಱು - ಎಂದು ಅನೇಕಾವೃತ್ತಿ ಚಿನ್ತಿಸಿ, ಎನ್ನುಡೈ ಆವಿ - ನನ್ನ ಮನಸ್ಸು, ಊಡುೞಿ - ಒಳಗೇ, ವೇಮ್-ಸನ್ತಪ್ತವಾಗುತ್ತಿದೆ. ಅನ್ಱೋ - ಅಯ್ಯೋ!, ಎನ್ ಶೊಲ್ - ನನ್ನ ಮಾತನ್ನು, ಕೊಳ್ - ಅಂಗೀಕರಿಸು ಶಿವತ್ತಿಲುಮ್ - ಪರಮಪದವಾಸಕ್ಕಿಂತಲೂ, ಪಶುನಿರೈಮೇಯ್ಪ್ಪು-ಪಶುಗಳ ಸಂಘವನ್ನು ಮೇಯಿಸೋಣವನ್ನೇ, ಉಕತ್ತಿ-ನೀನು ಅಪೇಕ್ಷಿಸುತ್ತೀಯೆ ಅಲ್ಲವೇ?

( ಸ-ಗಾ-ರ || )—

ಗೋಪಾನಾಂ ನಾಯಕೋ ನಃ ಕುಲಮಣಿರಸಿ ಭೋ ದೇವ! ಬಿಮ್ಬಾಧರಸ್ತ್ವಂ
ಕ್ರೂರಾಃ ಕಂಸೇರಿತಾಶ್ಚಾತ್ಯಸುರಭಟಗಣಾ ಮೌನಿಭೀತ್ಯೈ ಚರನ್ತಿ |
ಏಕಸ್ತ್ವಂ ನಿಸ್ಸಹಾಯೋ ಬಲಮಪಿ ಚ ವಿಹಾಯೈವ ರಾಮಂ ಪ್ರಯಾಸಿ !
ಕ್ಲೇಶಾಸ್ತೇ ಸ್ಯುರ್ವಚೋ ಮೇ ಶೃಣು ! ಪರಮಪದಾತ್ ಕಿಂ ವರಂ
ಗೋಪಕೃತ್ಯಮ್ ? ||

ತಾ|| ಬಿಂಬಾಧರವುಳ್ಳ ನಮ್ಮ ಗೋಪಕುಲನಾಥನೇ! ಪ್ರಬಲಹಸ್ತರಾದ ರಾಕ್ಷಸರು ಕಂಸನ ಪ್ರೇರಣೆಯಿಂದ ಬರುತ್ತಿರುವುದರಿಂದ ತಪಸ್ವಿಗಳಾದ ಋಷಿಗಳು (ನಿನಗೇನು ಅಪಾಯವು ಬರುವುದೋ ಎಂದು) ಮನಃ ಕ್ಷೋಭದಿಂದ ಅಲ್ಲಲ್ಲಿ ನಿಂತು ಸಂಚರಿಸುತ್ತಿರುವರು. ನೀನು ಅಸಹಾಯನಾಗಿಯೇ ಸಂಚರಿಸುತ್ತೀಯೆ. ಬಲಿಷ್ಠನಾದ ನಿನ್ನ ಅಣ್ಣನಾದ ಬಲರಾಮನನ್ನೂ ನೀನು ಬಿಟ್ಟುಇರೋಣದರಿಂದ ಅವನೊಡನೆ ಸಂಚರಿಸುವುದೂ ಇಲ್ಲ; ಆದುದರಿಂದ ಅಪಾಯಗಳು ಸಂಭವಿಸುವುವು—ಎಂದು ಚಿನ್ತಿಸಿ ಚಿನ್ತಿಸಿ ನನ್ನ ಮನಸ್ಸು ಒಳಗೇ ಸನ್ತಪ್ತವಾಗುತ್ತಿದೆ. ಅಯ್ಯೋ! ನನ್ನ ಮಾತನ್ನು ಕೇಳು. ನೀನು ಪರಮಪದವಾಸಕ್ಕಿಂತಲೂ ಪಶುಗಣಗಳನ್ನು ಮೇಯಿಸೋಣವನ್ನೇ ಅಪೇಕ್ಷಿಸುತ್ತೀಯೆ—ಅಲ್ಲವೆ ?

(೧೧) ಶೆಙ್ಕನಿವಾಯೆಙ್ಗಳಾಯರ್‌ತೇವ ತ್ತಿರುವಡಿತಿರುವಡಿಮೇಲ್,
ಪೊರುನಲ್
ಶಙ್ಗಣಿತುತ್ತಾವರ್ ವಣ್‌ತೆಕುರುಕೂರ್ ವಣ್‌ಶಡಕೋಪರ್
ಶೊಲ್ಲಾಯಿರತ್ತುಳ್,
ಮಙ್ಗೈಯರಾಯರ್‌ಚ್ಚಿಯರಾಯ್‌ನ್ದ ಮಾಲೈಯುವ
ನೊಡುವರ್ ಪಿರಿವದಕ್ಕಿರಙ್ಗಿ, ತ್ತೈಯಲ್
ಅಙ್ಗವರ್ ಪಶುನಿರೈ ಮೇಯಪ್ಪೋಕೆಪ್ಪಾನುರೈತ್ತನ
ವಿಮ್ಮೈಯುಮಾ ಪತ್ತುಮರ್ ಶಿರ್ ಶಾರ್ವೇ.

ಪ್ರ|| ಶೆಙ್ಗನಿವಾಯ್ – ಕೆಂಪಾದ ಬಿಂಬಫಲದಂತೆ ಅಧರವುಳ್ಳ, ಎಙ್ಗಳ್ ಆಯರ್‌ತೇವು-ನಮ್ಮ ಗೋಪಾಲಕುಲತಿಲಕನಾದ, ಅತ್ತಿರುವಡಿ-ಆ ಸರ್ವೇಶ್ವರನ, ತಿರುವಡಿಮೇಲ್–ಪಾದಗಳಮೇಲೆ, ಪೊರುನಲ್–ತಾಮ್ರಪರ್ಣಿಯಲ್ಲಿ, ಶಙ್ಗು ಅಣಿ-ಶಙ್ಖಗಳು ಸೇರುವ, ತುತ್ತಾವರ್-ಘಟ್ಟದ ಸ್ವಾಮಿಯಾದ, ವಣ್-ಸಮ್ಪದ್ವಿಶಿಷ್ಟವಾದ,

ತೇರ್-ರಮ್ಯವಾದ, ಕುರುಕೂರ್-ಕುರುಕಾಪುರಿಯ, ವಣ್-ಉದಾರಹೃದಯರಾದ, ಶಠಕೋಪನ್ ಶೊಲ್ - ಶಠಾರಿಮುನಿವರ್ಯರು ಸ್ತುತಿರೂಪವಾಗಿ ರಚಿಸಿದ, ಆಯಿರತ್ತುಳ್ - ಸಹಸ್ರಪದ್ಯಮಾಲೆಯೊಳು, ಮಙ್ಗೈಯರ್ - ಯೌವನವುಳ್ಳ, ಆಯ್ಚ್ಚಿಯರ್-ಗೋಪಿಗಳು, ಆಯ್ನ್ದಮಾಲೈ-ಅನುಸನ್ಧಿಸಿದ ಮಾಲೆಯಾದ, ಅವನೊಡುಮ್-ಅವನೊಡನೆ, ಪಿರಿವದಱ್ಕು-ವಿಶ್ಲೇಷವಂ ಹೊಂದಲು, ಇರಙ್ಗಿ-ಕ್ಲೇಶಪಟ್ಟು, ಅಙ್ಗು - ಆ ಗೋಷ್ಠಿಯಲ್ಲಿ, ತೈಯಲ್ - ಪ್ರಬಲೆಯಾದ ಒಂದು ಗೋಪಿಯು, ಅವನ್-ಅವನ, ಪಶುನಿರೈಮೇಯ್ಪ್ಪು - ಪಶುಸಂಘವನ್ನು ಮೇಯಿಸೋಣವನ್ನು, ಒಳಿಪ್ಪಾನ್-ಬಿಡಿಸುವುದಕ್ಕಾಗಿ, ಉರೈತ್ತನ-ಹೇಳಿದ, ಇವ್ವೈಯುಮ್ ಪತ್ತು-ಈ ಹತ್ತುಪದ್ಯಗಳು, ಅವಱ್ಱಿನ್ ಶಾರ್ವೇ-ಆ ಪದ್ಯಗಳ ಫಲವಾದ ಅವನ ಸಂಶ್ಲೇಷವನ್ನು ಹೊಂದುವಂತೆ ಮಾಡುವುವು.

( ಸ-ಗಾ-ರ )—

ಅಸ್ಮದ್ಗೋಪಾನ್ವಯೇನ್ದೋಶ್ಚರಣಯುಗಳಮೇವಾತ್ರ ಬಿಮ್ಬಾಧರಸ್ಯ
ಸ್ತೋತುಂ ಚೋದಾರಭಾವಶ್ಶಠರಿಪುರವದತ್ಸೂಕ್ತಿಮಾಲಾಸಹಸ್ರೇ ।
ಗೋಪೀನಾಂ ವಾಕ್ಯರೀತ್ಯಾ ಪಶುಗಣಮನು ಮಾಗಚ್ಛ ಕಾನ್ತಾಂ ವಿಹಾಯ
ಶ್ರೀಮನ್ ಮಾಮಿತ್ಯಪೀದಂ ದಶಕಮಪಿ ನಯೇದ್ವಾಚಕಾಂಸ್ತಸ್ಯ
ಗೋಷ್ಠೀಮ್ ॥

ತಾ॥ ಬಿಂಬಾಧರವುಳ್ಳ ನಮ್ಮ ಗೋಪಕುಲತಿಲಕನಾದ ಆ ಸರ್ವೇಶ್ವರನ (ಶ್ರೀಕೃಷ್ಣನ) ಪಾದಗಳ ವಿಷಯದಲ್ಲಿ ಸ್ತುತಿರೂಪವಾಗಿ—ತಾಮ್ರಪರ್ಣೀನದೀತೀರವಾಸಿಯಾದ ಕುರುಕಾಪುರೀಶ್ವರನಾದ ಶ್ರೀ ಶಠಾರಿಮುನಿಯು ರಚಿಸಿ ಇರುವ ಸಹಸ್ರಪದ್ಯಮಾಲೆಯೊಳು, ಯುವತಿಯರಾದ ಗೋಪಿಗಳು ಅನುಸಂಧಿಸಿದ ಮಾಲೆಯಾದ ಈ ದಶಕವು ಅವನ ವಿಶ್ಲೇಷವಂ ಸಹಿಸಲಾರದ ಗೋಪಿಯು—"ನೀನು ಪಶುಸಂಘವನ್ನು ಮೇಯಿಸುವುದಕ್ಕೆ ಹೋಗಬೇಡ"—ಎಂದು ಅವನನ್ನು ತಡೆದು ಸಂಶ್ಲೇಷವನ್ನೇ ಅಪೇಕ್ಷಿಸುವುದರಿಂದ ಪಠಿಸುವವರಿಗೆ ಅವನ ಆ ಸಂಶ್ಲೇಷವನ್ನೇ ಉಂಟುಮಾಡುವುದು.

( ದ್ರ–ಉ–ಸಂ ॥ )—

ಗೋಪೀನಿಯುಕ್ತಮಪಿ ಗೋಚಪಲಂ ವಿಯುಕ್ತಂ
ದಾಸ್ಯಂ ಶಮಪ್ಯಚಿರಮೇವ ಹರಿಂ ನಿಜೇಷ್ಟಮ್ ।
ಸ್ವೋಪೇಕ್ಷಕಂ ತಮತಿಶಙ್ಕ್ಯ ಮುನಿಸ್ಸ ತೇನ
ವಿಸ್ರಮ್ಭಿತೋ ವಿಪುಲತೃಷ್ಣತಯಾ ತೃತೀಯೇ ॥

( ದ್ರ–ಉ–ತಾ–ರ ॥ )—

ಅಮ್ಭೋಜಾಕ್ಷತ್ವಕೀರ್ತ್ಯಾ ಯದುಕುಲಜತಯಾ ಚಾತ್ಮನಶ್ಶ್ಯಾಮಲತ್ವಾ-
ದ್ಭೋಗಿವಿನ್ಯಸ್ತತ್ವಾತ್ ಪ್ರಿಯೋದ್ಯದ್ವಚವಪರತಯಾ ಚಕ್ರರಾಜಾಯುಧತ್ವಾತ್ ।*
ಶ್ರೀನಿಲಾಶ್ಮಪ್ರಭತ್ವಾದತಿಸುಭಗತಯಾ ಗೋಪನಿರ್ವಾಹಕತ್ವಾ-
ದಸ್ಥಾಸಸ್ನೇಹಶಙ್ಕಾಸ್ಪದರಸ ಉದಿತ ಶ್ರೀಪತೇಃ ಕಾರಿಜೇನ ॥

(ಈ ತೃತೀಯದಶಕದ ಸಾರಾಂಶ—)

ಈ ಮೂರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು—ಸಾಯಿಕಾದಶಿಯನ್ನು ಹೊಂದಿ ಗೋಪಕುಲತಿಲಕನಾದ ಸ್ವಾಮಿಯ ವಿಶ್ಲೇಷವನ್ನು ಸಹಿಸಲಾರದೆ—'ನೀನು ಪಶುಗಳನ್ನು ಮೇಯಿಸಲು ಹೋಗಬೇಡ. ಹೋದರೆ ನಾನು ಪ್ರಾಣವನ್ನು ಧರಿಸಲಾರೆನು. ನನ್ನಮೇಲೆ ನೀನು ಕೃಪೆಮಾಡುವುದೇ ಇಲ್ಲ. ನೀನು ವಂಚಕೋಕ್ತಿಗಳಿಂದ ನನಗೆ ಇನ್ನೂ ಸನ್ತಾಪವನ್ನು ಹೆಚ್ಚಿಸುತ್ತೀಯೆ. ಹೀಗೆ ಮಾಡದೆ ನೀನು ನನಗೆ ಸಂಶ್ಲೇಷಸುಖವನ್ನು ಆಲಿಂಗನಾದಿಗಳಿಂದ ಉಂಟುಮಾಡಿ ನನ್ನ ತಲೆಯಮೇಲೆ ನಿನ್ನ ದಿವ್ಯಹಸ್ತವನ್ನು ಇಡು. ನೀನು ಪಶುಗಳನ್ನು ಮೇಯಿಸಲು ಹೋದರೆ ರಾಕ್ಷಸರೊಡನೆ ಯುದ್ಧವು ಪ್ರಾಪ್ತವಾಗಿ ಅಪಾಯಗಳು ಸಂಭವಿಸುವುವು. ಅಯ್ಯೋ! ನನ್ನ ಮಾತನ್ನು ಕೇಳು. ನೀನು ಇಲ್ಲಿಯೇ ಇದ್ದುಕೊಂಡು ನನಗೆ ಸಂಶ್ಲೇಷಸುಖವನ್ನು ಉಂಟುಮಾಡು''—ಎಂದು ಮೊರೆಯಿಡುತ್ತ ತಮ್ಮ ವಿರಹವೇದನೆಯನ್ನು ವರ್ಣಿಸಿ ಇರುತ್ತಾರೆ.

---

* ಚಕ್ರರಾಜಾಯುಧತ್ವಾದಿತ್ಯತ್ರ–ರಮ್ಯನೇತ್ರಾಭಿರೂಪ್ಯಾದಿತ್ಯೇವ ಸುವಚವ್ ॥
ಅಬ್ಧಿಶಬ್ದೋಽತ್ರ ಸಮುದ್ರಪರಃ, ನ ತು ಚಕ್ರಪರಃ—ಇತಿ ವ್ಯಾಖ್ಯಾನೇಷು ಸುವ್ಯಕ್ತಮ್ ॥
(ಶ್ರೀಕಲ್ಪಿಃ)

——:❀:——

ಶ್ರೀಃ

# ದಶಮಶತಕದಲ್ಲಿ—ಚತುರ್ಥದಶಕ.

(ಶಾರ್ವೇದವನೆಡಿ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಸರ್ವೇಶ್ವರನ ಪರತ್ವಭೋಗ್ಯತ್ವಾದಿ ಮಾಹಾತ್ಮ್ಯವನ್ನು ಅನುಸನ್ಧಿಸಿ ಅತ್ಯನ್ತ ಪ್ರೀತರಾಗುತ್ತಾರೆ.)

---

(೧) ಶಾರ್ವೇತವನೆಡಿಕ್ಕು ತಾಮೋದರನ್ ತಾಳ್‌ಕಳ್
ಕಾರ್‌ಮೇಕವಣ್ಣನ್ ಕಮಲನಯನತ್ತನ್,
ನೀರ್‌ವಾನಮ್ ಮಣ್ಣೆರಿಕಾಲಾಯ್ ನಿನ್ರ ನೇಮಿಯಾನ್
ಪೇರ್‌ವಾನವರ್‌ಕಳ್ ಪಿದಱ್ರುಮ್ ಪೆರುಮೈಯನೇ.

ಪ್ರ|| ಕಾರ್‌ಮೇಕವಣ್ಣನ್—ಕಾಳಮೇಘದಂತೆ ಶ್ಯಾಮಳವರ್ಣನಾದ, ಕಮಲ ನಯನತ್ತನ್—ತಾವರೆಯಂತೆ ಕಣ್ಣುಗಳುಳ್ಳವನಾದ, ನೀರ್-ನೀರು, ವಾನಮ್-ಆಕಾಶವು, ಮಣ್-ಭೂಮಿಯು, ಎರಿ—ಅಗ್ನಿಯು, ಕಾಲ್-ವಾಯುವೂ, ಆಯ್-ಆಗಿ, ನಿನ್ರ-ನಿಂತ, ನೇಮಿಯಾನ್—ಚಕ್ರಧಾರಿಯಾಗಿರುವ, ಪೇರ್—ಅನುರೂಪ ನಾಮಧೇಯಗಳನ್ನು, ವಾನವರ್‌ಕಳ್-ಪರಮಪದವಾಸಿಗಳು, ಪಿದಱ್ರುಮ್-ಪ್ರೀತಿಯಿಂದ ಅಕ್ರಮವಾಗಿ ಹೇಳುವ, ಪೆರುಮೈಯನೇ-ಮಹಿಮೆಯುಳ್ಳವನಾದ, ದಾಮೋದರನ್-ದಾಮೋದರನ, ತಾಳ್‌ಕಳ್ – ಪಾದಗಳು, ತವನೆಡಿಕ್ಕು-ತಪೋ ಮಾರ್ಗಕ್ಕೆ (ಭಕ್ತಿಮಾರ್ಗಕ್ಕೆ), ಶಾರ್ವೇ—ಪ್ರಾಪ್ಯವಾಗಿಯೇ ಇವೆ.

( ಸ-ಗಾ-ರ || )—

ನೀಲಾಮ್ಬುದಾಭತನುರಬ್ಜವಿಲೋಚನೋಽಸೌ
ಯಃ ಪಞ್ಚಭೂತಮಯ ಏವ ಚ ಚಕ್ರಪಾಣಿಃ |
ಸೂರೀಶ್ವರೈರಪಿ ಚ ತಸ್ಯ ಸುಕೀರ್ತಿತಸ್ಯ
ದಾಮೋದರಸ್ಯ ಚರಣೌ ನನು ಭಕ್ತಿಲಭ್ಯೌ ||

ತಾ|| ನೀಲಮೇಘಶ್ಯಾಮನಾಗಿಯೂ, ಪುಣ್ಡರೀಕಾಕ್ಷನಾಗಿಯೂ, ಪಞ್ಚ ಭೂತಾನ್ತರಾತ್ಮನಾಗಿಯೂ, ಚಕ್ರಪಾಣಿಯಾಗಿಯೂ, ನಿತ್ಯಸೂರಿ ಸಙ್ಕೀರ್ತ್ಯ ನಾಗಿಯೂ-ಇರುವ ದಾಮೋದರನ ಪಾದಗಳು ಭಕ್ತಿಮಾರ್ಗದಿಂದ ಪ್ರಾಪ್ಯವಾಗಿವೆ.

(೨) ಪೆರುಮೈಯನೇ ವಾನತ್ತಿಮೈಯೋರ್ಕ್ಕುಮ್ ಕಾಣ್ಡಱ್ಕು
ಅರುಮೈಯನೇ ಯಾಕತ್ತಣೈಯಾದಾರ್ಕ್ಕು ಎನ್ಱುಮ್
ತಿರುಮೆಯ್ಯುತ್ತುಕಿನ್ಱ ಶೆಙ್ಗಣ್ಮಾಲ್, ನಾಳುಮ್
ಇರುವಿನೈ ಕಡಿನ್ದಿಙ್ಗೆನ್ನೈ ಯಾಳ್ಕಿನ್ಱಾನೇ.

ಪ್ರ॥ ವಾನತ್ತು–ಸ್ವರ್ಗಲೋಕದಲ್ಲಿರುವ, ಇಮೈಯೋರ್ಕ್ಕುಮ್–ಬ್ರಹ್ಮಾದಿ ದೇವತೆಗಳಿಗೂ, ಪೆರುಮೈಯನೇ – ಅಗೋಚರನಾದ ಮಹಾಮಹಿಮೆಯುಳ್ಳವನಾಗಿಯೂ, ಆಕತ್ತು–ಮನಸ್ಸಿನಲ್ಲಿ, ಅಣೈಯಾದಾರ್ಕ್ಕು–ಸ್ಮರಿಸದೆ ಇರುವವರಿಗೆ, ಕಾಣ್ಡಱ್ಕು–ನೋಡಲು, ಅರುಮೈಯನೇ–ಅಸಾಧ್ಯನಾಗಿಯೂ, ಎನ್ಱುಮ್–ಯಾವಾಗಲೂ, ತಿರು–ಶ್ರೀದೇವಿಯು, ಮೆಯ್–ತನ್ನ ಶರೀರದಲ್ಲಿ (ವಕ್ಷಸ್ಥಲದಲ್ಲಿ), ಉತ್ತುಕಿನ್ಱ–ನಿತ್ಯವಾಸಮಾಡುವುದರಿಂದ, ಶೆಙ್ಗಣ್–ಐಶ್ವರ್ಯಸೂಚಕವಾದ ಅನುರಕ್ತನೇತ್ರಗಳುಳ್ಳವನಾಗಿಯೂ ಇರುವ, ಮಾಲ್–ಸ್ವಾಮಿಯು, ಇರುವಿನೈ–ದ್ವಿವಿಧವಾದ, ವಿನೈ–ಪುಣ್ಯಪಾಪರೂಪಕರ್ಮಗಳನ್ನು, ಕಡಿನ್ದು–ಧ್ವಂಸಮಾಡಿ, ಇಙ್ಗು–ಈ ಲೀಲಾವಿಭೂತಿಯಲ್ಲಿ, ನಾಳುಮ್–ಪ್ರತಿದಿನವೂ, ಎನ್ನೈ–ನನ್ನನ್ನು, ಆಳ್ಕಿನ್ಱಾನೇ–ಆಳುತ್ತಿದಾನಷ್ಟೆ !

( ಸ–ಗಾ–ರ ॥ )—

ದಿವ್ಯಾಮರಾಧಿಪತಿರೇವ ನಿಜಪ್ರಭಾವಾ–
ದ್ದೃಶ್ಯೋ ನ ಯಸ್ತು ಭುವಿ ಭಕ್ತಿವಿಯುಕ್ತಚಿತ್ತೈಃ ।
ನಿತ್ಯಂ ಶ್ರಿಯಾ ಸಹಿತ ಏವ ಚಕಾಸ್ತಿ ಮೂರ್ತ್ಯಾಂ
ಪದ್ಮಾಕ್ಷಕೋಽಸ್ತ್ಯಘಹರೋ ಮಮ ನಾಯಕೋಽಸೌ ॥

ತಾ॥ ಸ್ವರ್ಗಲೋಕವಾಸಿಗಳಾದ ಬ್ರಹ್ಮಾದಿದೇವತೆಗಳಿಗೂ ಅಗೋಚರವಾದ ಮಹಿಮೆಯುಳ್ಳವನಾಗಿಯೂ, ಸನ್ತತ ಧ್ಯಾನಮಾಡದೆ ಇರುವವರಿಗೆ ದೃಷ್ಟಿಗೋಚರನಾಗದೆ ಇರುವವನಾಗಿಯೂ, ಲಕ್ಷ್ಮೀವಕ್ಷಸ್ಕನಾಗಿ ಅನುರಕ್ತನೇತ್ರನಾಗಿಯೂ ಇರುವ ಸ್ವಾಮಿಯು ದ್ವಿವಿಧ ಕರ್ಮಗಳನ್ನೂ ಧ್ವಂಸಮಾಡಿ ಈ ಲೀಲಾವಿಭೂತಿಯಲ್ಲಿ ಪ್ರತಿದಿನವೂ ನನ್ನನ್ನು ಆಳುತ್ತಿದಾನಷ್ಟೆ !

(೩) ಆಳ್‌ಕಿನ್ಱಾನಾೞಿಯಾನಾರಾಲ್ ಕುಱೈವುಡೈಯಮ್,
ಮೀಳ್‌ಕಿನ್ಱದಿಲ್ಲೈ ಪ್ಪಿಱವಿತ್ತುಯರ್ ಕಡಿನ್ದೋಮ್,
ವಾಳ್‌ಕೆಣ್ಡೈಯೊಣ್‌ಕಣ್ ಮಡಪ್ಪಿನ್ನೈ ತನ್‌ಕೇಳ್ವನ್,
ತಾಳ್‌ಕಣ್ಡುಕೊಣ್ಡೆನ್ ತಲೈಮೇಲ್ ಪುನೈನ್ದೇನೇ.

ಪ್ರ॥ ಆೞಿಯಾನ್- ಚಕ್ರಪಾಣಿಯಾಗಿ, ಆಳ್‌ಕಿನ್ಱಾನ್-(ವಿರೋಧಿ ನಿರಸನವಂ ಮಾಡಿ) ರಕ್ಷಿಸುತ್ತಿದಾನೆ. ಪಿಱವಿತ್ತುಯರ್ – ಸಕಲ ಜನ್ಮದುಃಖಗಳನ್ನೂ, ಕಡಿನ್ದೋಮ್ – ಧ್ವಂಸಮಾಡಿದೆವು. ಮೀಳ್‌ಕಿನ್ಱದಿಲ್ಲೈ – ಇನ್ನುಮೇಲೆ ಅವು ಪುನಃ ಉಂಟಾಗುವುದೇ ಇಲ್ಲ. ಆರಾಲ್‌ಕುಱೈವು ಉಡೈಯಮ್ – ಯಾರಿಂದ ನಾವು ಕೊರತೆಯನ್ನು ಪಡೆದಿರುತ್ತೇವೆ? ವಾಳ್‌ಕೆಣ್ಡೈ ಒಣ್‌ಕಣ್-ಮೀನುಗಳಿಗೆ ಸಮಾನವಾದ ರಮಣೀಯ ನೇತ್ರಗಳುಳ್ಳ, ಮಡಪ್ಪಿನ್ನೈತನ್ – ಸುಶೀಲೆಯಾದ ನೀಳಾದೇವಿಗೆ, ಕೇಳ್ವನ್ – ಪ್ರಿಯವಲ್ಲಭನಾದ ಕೃಷ್ಣನ, ತಾಳ್–ಪಾದಗಳನ್ನು, ಕಣ್ಡುಕೊಣ್ಡು– ಕಣ್ಡು, ಎನ್ ತಲೈಮೇಲ್–ನನ್ನ ತಲೆಯಮೇಲೆ, ಪುನೈನ್ದೇನೇ– ಧರಿಸಿ ಇರುತ್ತೇನೆ.

( ಸ–ಗಾ–ರ ॥ )—

ಚಕ್ರಂ ಬಿಭರ್ತಿ ! ನನು ರಕ್ಷತಿ ನಸ್ತತೋಽದ್ಯ
ಧ್ವಸ್ತಂ ಸಮಸ್ತಭವದುಃಖಮಪಿ ಕ್ಷಣಾನ್ನಃ ।
ಹಾನಿರ್ನ ಕಾಚಿದಪಿ ನಃ ಕಿಲ ಜಾತು ಚ ಸ್ಯಾ-
ನ್ನೀಳಾಪತೇಸ್ತು ಚರಣೌ ಶಿರಸಾ ವಹಾಮಃ ॥

ತಾ॥ ಭಗವಂತನು ಚಕ್ರಧರನಾಗಿ ನಮ್ಮನ್ನು ರಕ್ಷಿಸುತ್ತಿದಾನೆ. ಆದುದರಿಂದ ನಾವು ಸಕಲ ಜನ್ಮದುಃಖಗಳನ್ನೂ ನಿವಾರಣಮಾಡಿದೆವು. ಇನ್ನುಮೇಲೆ ಅವು ಪುನಃ ಉಂಟಾಗುವುದೇ ಇಲ್ಲ. ಯಾರಿಂದ ನಮಗೆ ಕೊರತೆಯುಂಟಾಗುವುದು? ಮೀನಲೋಚನೆಯಾದ ಸುಶೀಲೆಯಾದ ನೀಳಾದೇವಿಗೆ ಪ್ರಿಯವಲ್ಲಭನಾದ ಶ್ರೀಕೃಷ್ಣನ ಪಾದಗಳನ್ನು ಕಂಡು ಅವುಗಳನ್ನು ನನ್ನ ತಲೆಯಮೇಲೆ ಧರಿಸಿ ಇರುತ್ತೇನೆ.

(೪) ತಲೈಮೇಲ್ ಪುನೈನ್ದೇನ್ ಶರಣಙ್ಗಳ್ ಆಲಿನ್
ಇಲೈಮೇಲ್ ತುಯಿನ್ಱಾನಿಮೈಯೋರ್ ವಣಙ್ಗ,
ಮಲೈಮೇಲ್ ತಾನ್ ನಿನ್ಱೆನ್ ಮನತ್ತುಳಿರುನ್ದಾನೈ
ನಿಲೈಪೇರ್ಕ್ಕಲಾಕಾಮೈ ನಿಚ್ಚಿತ್ತಿರುನ್ದೇನೇ.

ಪ್ರ॥ ಶರಣಙ್ಗಳ್–ಅವನ ಪಾದಗಳನ್ನು, ತಲೈಮೇಲ್–ನನ್ನ ತಲೆಯಮೇಲೆ, ಪುನೈನ್ದೇನ್–ಧರಿಸಿ ಇರುತ್ತೇನೆ. ಆಲಿನ್ ಇಲೈಮೇಲ್–ಆಲದ ಎಲೆಯಮೇಲೆ, ತುಯಿನ್ಱಾನ್ – ಮಲಗಿದವನಾಗಿ, ಇಮೈಯೋರ್ – ನಿತ್ಯಸೂರಿಗಳು, ವಣಙ್ಗ–ನಮಸ್ಕರಿಸುವಂತೆ, ಮಲೈಮೇಲ್ – ತಿರುಪತಿಯ ಬೆಟ್ಟದಮೇಲೆ, ತಾನ್–ತಾನೇ, ನಿನ್ಱು–ನಿಂತು, ಎನ್ ಮನತ್ತುಳ್ – ನನ್ನ ಮನಸ್ಸಿನಲ್ಲಿ, ಇರುನ್ದಾನೈ – ಸ್ಥಿರವಾಗಿ ನಿಂತವನನ್ನು ಕುರಿತು, ನಿಲೈಪೇರ್ಕ್ಕಲ್ ಆಕಾಮೈ- ಅವನ ಸ್ಥಿತಿಯನ್ನು ಬದಲಾಯಿಸಲು ಆಗುವುದಿಲ್ಲವೆಂಬುದನ್ನು, ನಿಚ್ಚಿತ್ತು – ನಿಶ್ಚಯಿಸಿ, ಇರುನ್ದೇನೇ–ಕೃತಕೃತ್ಯನಾಗಿ ಇರುತ್ತೇನೆ.

( ಸ–ಗಾ–ರ ॥ )—

ಧೃತ್ವಾ ಚ ತಸ್ಯ ಚರಣೌ ಶಿರಸಾಽಸ್ಮಿಧನ್ಯ-
ಸ್ತಂ ಸೂರಿಭಿಶ್ಚ ವಟಪತ್ರಶಯಂ ಸುಸೇವ್ಯಮ್ ।
ಶ್ರೀಶೈಲವಾಸಮಪಿ ಮೇ ಹೃದಿ ನಿತ್ಯವಾಸಂ
ನಿಶ್ಚಿತ್ಯ ಚಾಸ್ಮಿ ಕೃತಕೃತ್ಯ ಇಹಾದ್ಯ ಮಾನ್ಯಃ ॥

ತಾ॥ ಅವನ ಪಾದಗಳನ್ನು ನನ್ನ ತಲೆಯಮೇಲೆ ಧರಿಸಿ ಇದುತ್ತೇನೆ. ಆಲದ ಎಲೆಯಮೇಲೆ ಮಲಗಿದವನಾಗಿ ನಿತ್ಯಸೂರಿಗಳಿಗೆ ವನ್ದ್ಯನಾಗಿ ತಿರುಪತಿಯ ಬೆಟ್ಟದಮೇಲೆ ಬಂದು ನಿಂತು ನನ್ನ ಮನಸ್ಸಿನಲ್ಲೂ ಸ್ಥಿರವಾಗಿ ನಿಂತು ಇರುವ ಆ ಸ್ವಾಮಿಯನ್ನು ಕುರಿತು—ಅವನ ಸ್ಥಿತಿಯನ್ನು ಬದಲಾಯಿಸಲು ಆಗುವುದೇ ಇಲ್ಲವೆಂದು ನಿಶ್ಚಯಿಸಿ ನಾನು ಕೃತಕೃತ್ಯನಾಗಿದೇನೆ.

(೫) ನಿಚ್ಚಿತ್ತಿರುನ್ದೇನೆನ್ನೆಞ್ಜಮ್ ಕೞಿಯಾಮೈ,
ಕೈಚ್ಚಕ್ಕರತ್ತಣ್ಣಲ್ ಕಳ್ವಮ್ ಪೆರಿದುಡೈಯನ್,
ಮೆಚ್ಚಪ್ಪಡಾನ್ ಪಿಱರ್ಕ್ಕು ಮೆಯ್ಪೋಲುಮ್ ಪೊಯ್ವಲ್ಲನ್,
ನಚ್ಚಪ್ಪಡುಮ್ ನಮಕ್ಕು ನಾಕತ್ತಣ್ಣಿಯಾನೇ.

ಪ್ರ॥ ಎನ್ನೆಞ್ಜಮ್-ನನ್ನ ಮನಸ್ಸನ್ನು, ಕಳಿಯಾವೈ-ಬಿಡದೆ ಇರೋಣವನ್ನು, ನಿಚ್ಚಿತ್ತಿರುನ್ದೇನ್-ನಿಶ್ಚಯಿಸಿ ಇದ್ದೆನು. ಕೈಚಕ್ಕರತ್ತು-ಹಸ್ತದಲ್ಲಿ ಚಕ್ರವನ್ನು ಧರಿಸಿರುವ, ಅಣ್ಣಲ್-ಸ್ವಾಮಿಯಾದ, ಕಳ್ವಮ್‌ಪೆರಿದು ಉಡೈಯನ್- ಮಹಾವಂಚನೆಯನ್ನುಳ್ಳವನಾದ, ಪಿರರ್‌ಕ್ಕು ನೆಚ್ಚಪ್ಪಡಾನ್-ಅನ್ಯರಿಂದ ಸ್ತುತಿಸಲ್ಪಡದೆ ಇರುವವನಾಗಿಯೂ, ಮೆಯ್‌ಪೋಲುಮ್-ಆಶ್ರಿತರಿಗೆ ಸತ್ಯಶೀಲನಾಗಿರುವಂತೆ, ಪೊಯ್‌ವಲ್ಲನ್-ಅನಾಶ್ರಿತರಿಗೆ ಅಸತ್ಯಶೀಲನಾಗಿಯೂ ಇರಬಲ್ಲವನಾದ, ನಾಕತ್ತಣೈಯಾನೇ-ಶೇಷಶಾಯಿಯಾದವನೇ, ನಮಕ್ಕು-ನಮಗೆ, ನಚ್ಚಪ್ಪಡುಮ್-ಪ್ರೀತಿಪಾತ್ರನಾದವನು.

( ಸ-ಗಾ-ರ ॥ )—

ಮಚ್ಚಿತ್ತವಾಸಿನಮಿಮಂ ಸತತಂ ಮುರಾರಿಂ
ನಿಶ್ಚಿತ್ಯ ಚಕ್ರಧರಮೇವ ಚ ಮಾಯಿವೃತ್ತಮ್ ।
ಜಾನಾಮಿ ದೂರಗಮಿಮಂ ಹಿ ಹರಿಂ ಪರೇಷಾಂ
ಸತ್ಯಂ ತ್ವಸತ್ಯಮಪಿ ಶೇಷಶಯಂ ಪ್ರಿಯಂ ನಃ ॥

ತಾ॥ ಅವನು ನನ್ನ ಮನಸ್ಸನ್ನು ಬಿಡದೆ ಇದಾನೆಂದು ನಾನು ನಿಶ್ಚಯಿಸಿ ಇರುತ್ತೇನೆ. ಚಕ್ರಪಾಣಿಯಾದ ಆ ಸ್ವಾಮಿಯು ಅನಾಶ್ರಿತರಿಗೆ ವಂಚಕನಾಗಿಯೂ, ತನ್ನ ಭಕ್ತರಿಗಲ್ಲದೆ ಇತರರಿಗೆ ಸ್ತೋತ್ರಾರ್ಹನಾಗದೆ ಸತ್ಯಾಸತ್ಯರೂಪಿಯಾಗಿ, ಶೇಷಶಾಯಿಯಾಗಿರುವ ಸರ್ವೇಶ್ವರನಾದುದರಿಂದ ಅವನೇ ನಮಗೆ ಪ್ರಿಯತಮನು.

(೭) ನಾಕತ್ತಣೈಯಾನೈ ನಾಳ್‌ತೊಱುಮ್ ಞಾನತ್ತಾಲ್,
ಆಕತ್ತಣೈಪ್ಪಾರ್‌ಕ್ಕರುಳ್ ಶೆಯ್ಯುಮಮ್ಮಾನೈ,
ಮಾಕತ್ತಿಳಮದಿಯುಮ್ ಶೇರುಮ್ ಶಡೈಯಾನೈ,
ಪಾಕತ್ತು ವೈತ್ತಾನ್ ತನ್ ಪಾದಮ್ ಪಣಿನ್ದೇನೇ.

ಪ್ರ॥ ನಾಕತ್ತು ಅಣೈಯಾನೈ – ಶೇಷಶಾಯಿಯಾದವನಾದ, ನಾಳ್‌ತೋಱುಮ್ – ಪ್ರತಿದಿನವೂ, ಞಾನತ್ತಾಲ್-ಭಕ್ತಿರೂಪಜ್ಞಾನದಿಂದ, ಆಕತ್ತು-ಮನಸ್ಸಿನಲ್ಲಿ, ಅಣೈಪ್ಪಾರ್‌ಕ್ಕು – ಅನುಭವಿಸುವ ಮುಮುಕ್ಷುಗಳಿಗೆ, ಅರುಳ್ ಶೆಯ್ಯುಮ್ – ಕೃಪೆಮಾಡುವ, ಅಮ್ಮಾನೈ-ಸ್ವಾಮಿಯಾದ, ಮಾಕತ್ತು-ಆಕಾಶಸಂಚಾರಿಯಾದ, ಇಳಮದಿಯುಮ್-ಬಾಲಚನ್ದ್ರನು, ಶೇರುಮ್-ಸಕ್ತವಾಗುವ, ಶಡೈಯಾನೈ-ಜಟೆಯುಳ್ಳ ರುದ್ರನನ್ನು, ಪಾಕತ್ತು-ತನ್ನ ಶರೀರದ ಒಂದು ಭಾಗದಲ್ಲಿ, ವೈತ್ತಾನ್‌ತನ್-ಇಟ್ಟವನಾದ ಸರ್ವೇಶ್ವರನ, ಪಾದಮ್-ಪಾದಗಳನ್ನು, ಪಣಿನ್ದೇನ್-ನಮಸ್ಕರಿಸಿದೆನು.

( ಸ–ಗಾ–ರ ॥ )—

ಶೇಷೇಶಯಾನಮಪಿ ಭಕ್ತಿಜುಷಾಂ ದಯಾಳುಂ
ಪಾರ್ಶ್ವೇ ವಹನ್ತಮಪಿ ತಂ ತರುಣೇನ್ದುಚೂಡಮ್ ।
ಅಸ್ಮತ್ಪ್ರಭುಂ ನನು ಹರಿಂ ಪರಮಂ ಭಜೇಽಹಂ !
ತತ್ಪದಪದ್ಮಯುಗಳಂ ಪ್ರಣಮಾಮಿ ನಿತ್ಯಮ್ ॥

ತಾ॥ ಶೇಷಶಾಯಿಯಾಗಿಯೂ, ಭಕ್ತಿಯುಕ್ತರಾದ ಮುಮುಕ್ಷುಗಳಿಗೆ ಕೃಪಾನಿಧಿಯಾಗಿಯೂ, ತರುಣೇನ್ದುಶೇಖರನಾದ ರುದ್ರನನ್ನು ತನ್ನ ಶರೀರದಲ್ಲಿ ಒಂದು ಪಾರ್ಶ್ವದಲ್ಲಿ ಧರಿಸಿರುವವನಾಗಿಯೂ ಇರುವ ಸರ್ವೇಶ್ವರನ ಪಾದಗಳನ್ನು ನಾನು ನಿತ್ಯವೂ ನಮಸ್ಕರಿಸಿ ಕೃತಕೃತ್ಯನಾಗಿ ಇರುತ್ತೇನೆ.

(೭) ಪಣಿನೆಞ್ಜೇ ನಾಳುಮ್ ಪರಮಪರಮ್ಪರನೈ,
ಪಿಣಿಯೊನ್ಱುಮ್ ಶಾರಾ ಪ್ಪಿಱವಿಕೆಡುತ್ತಾಳುಮ್,
ಮಣಿನಿಱತ್ತೋದಿ ಮದುಶೂದನೆನ್ನಮ್ಮಾನ್,
ಅಣಿನಿಱ ಶೆಮ್ಪೊನ್ನಡಲಾೞಿಯಾನೇ.

ಪ್ರ॥ ಮಣಿನಿಱತ್ತೋದಿ – ನೀಲಮಣಿಯಂತೆ ತೇಜಸ್ಸುಳ್ಳ, ಮದುಶೂದನ್– ಮಧುಸೂದನನಾದ, ಎನ್ನಮ್ಮಾನ್–ನನ್ನ ಸ್ವಾಮಿಯಾದ, ಅಣಿನಿಱ–ಅಲಂಕಾರವಾದ ಆಭರಣವಾಗಿ ನಿಂತ, ಶೆಮ್ಪೊನ್–ಕೆಂಪಾದ ಸ್ವರ್ಣದಂತೆ ಇರುವ, ಅಡಲ್–ಆಶ್ರಿತ ವಿರೋಧಿನಿರಸನಸಮರ್ಥವಾದ, ಆೞಿಯಾನೇ – ಚಕ್ರಾಯುಧವನ್ನು ಧರಿಸಿ ಇರುವವನಾದ, ಪಿಱವಿಕೆಡುತ್ತು – ನಮ್ಮ ಜನ್ಮ ಸಮ್ಬನ್ಧವನ್ನು ನಾಶಪಡಿಸಿ, ಆಳುಮ್–ನಮ್ಮನ್ನು ಆಳುವ, ಪಿಣಿ ಒನ್ಱುಮ್ ಶಾರಾ–ಸಂಸಾರಕ್ಲೇಶವು ಸ್ವಲ್ಪವೂ ಇಲ್ಲದಂತೆ ರಕ್ಷಿಸುವ, ಪರಮಪರಮ್ಪರನೈ – ಬ್ರಹ್ಮಾದಿದೇವತೆಗಳಿಗೂ ಅಧಿಪತಿಯಾದ ಸರ್ವೇಶ್ವರನನ್ನು, ನೆಞ್ಜೇ – ಮನಸ್ಸೇ !, ನಾಳುಮ್ – ಪ್ರತಿದಿನವೂ, ಪಣಿ–ಸೇವಿಸು.

( ಸ–ಗಾ–ರ ॥ )—

ಮಾಣಿಕ್ಯಭಾಸ್ವರತನುರ್ಮಧುಸೂದನೋಽಸೌ
ನಾಥೋ ಮಮಾಸ್ತಿ ಕನಕಪ್ರಭಚಕ್ರಧಾರೀ ।
ಭಕ್ತಾತ್ಮನಾಂ ಹಿ ಭವದುಃಖವಿನಾಶಕೋ ನಃ !
ಪ್ರಾಪ್ಯಂ ಪರಾತ್ಪರಮಮುಂ ಭಜ ಚಿತ್ತ ! ನಿತ್ಯಮ್ ॥

ತಾ|| ನೀಲಮಣಿವರ್ಣನಾದ ಮಧುಸೂದನನಾದ ತನ್ನ ಸ್ವಾಮಿಯಾಗಿಯೂ, ಹಿರಣ್ಮಯ ತೀವ್ರಚಕ್ರಧರನಾಗಿಯೂ, ಭವಪಾಶವಿನಾಶಕನಾಗಿಯೂ, ಅಸ್ಮದ್ರಕ್ಷಕನಾಗಿಯೂ, ಪರಾತ್ಪರನಾಗಿಯೂ, ಇರುವ ಸರ್ವೇಶ್ವರನನ್ನು–ಎಲೈ ಮನಸ್ಸೇ!–ನೀನು ಪ್ರತಿದಿನವೂ ಸೇವಿಸು.

(೮) ಆೞಿಯಾನಾೞಿ ಯಮರರ್ಕ್ಕುಮಪ್ಪಾಲಾನ್,
ಊೞಿಯಾನೊೞಿ ಪಡೈತ್ತಾನ್ ನಿರೈಮೇಯ್ತ್ತಾನ್,
ಪಾೞಿಯಮ್ ತೋಳಾಲ್ ವರೈಯೆಡುತ್ತಾನ್ ಪಾದಙ್ಗಳ್
ವಾೞಿಯೆನ್ನೆಞ್ಜೇ ಮಱವಾದು ವಾೞ್ತ್ತಕಣ್ಡಾಯ್.

ಪ್ರ|| ಆೞಿಯಾನ್ – ಚಕ್ರಧರನಾದ, ಆೞಿ – ಗಂಭೀರಸ್ವಭಾವನಾದ, ಅಮರರ್ಕ್ಕುಮ್–ನಿತ್ಯಸೂರಿಗಳಿಗೂ, ಅಪ್ಪಾಲಾನ್–ಅಗೋಚರವಾದ ಮಾಹಾತ್ಮ್ಯವುಳ್ಳವನಾದ, ಊೞಿಯಾನ್ – ಸಂಹಾರಕಾಲದಲ್ಲಿ ತಾನು ಒಬ್ಬನೇ ಕಲ್ಪಾಂತಸ್ಥಾಯಿಯಾದ, ಊೞಿಪಡೈತ್ತಾನ್–ಸೃಷ್ಟಿಕಾಲದಲ್ಲಿ ಸಕಲಲೋಕಗಳನ್ನೂ ಸೃಷ್ಟಿ ಮಾಡಿದವನಾದ, ನಿರೈಮೇಯ್ತ್ತಾನ್–(ಗೋಪಕುಲತಿಲಕನಾಗಿ) ಪಶುಸಂಘವನ್ನು ಮೇಯಿಸಿದವನಾದ, ಪಾೞಿ–ಬಲಿಷ್ಠವಾದ, ಅಮ್–ರಮ್ಯವಾದ, ತೋಳಾಲ್–ತೋಳಿನಿಂದ, ವರೈ–ಬೆಟ್ಟವನ್ನು (ಗೋವರ್ಧನಗಿರಿಯನ್ನು), ಎಡುತ್ತಾನ್–ಎತ್ತಿದ ಸ್ವಾಮಿಯ, ಪಾದಙ್ಗಳ್–ಪಾದಗಳನ್ನು, ಎನ್ನೆಞ್ಜೇ–ನನ್ನ ಮನಸ್ಸೇ!, ಮಱವಾದು – ಮರೆಯದಂತೆ, ವಾೞ್ತ್ತಕಣ್ಡಾಯ್ – ನಿತ್ಯಾನುಭವವಂ ಮಾಡಿ ಬಾಳು. ವಾೞಿ– ಈ ಸುಖಾನುಭವವು (ನಿನಗೆ) ನಿತ್ಯವಾಗಿ ಉಂಟಾಗಲಿ !.

( ಸ–ಗಾ–ರ || )—

ಶ್ರೀಚಕ್ರಪಾಣಿರಮರಾತಿಗಸುಪ್ರಭಾವ–
ಸ್ಸಂಹಾರಕೋಽಸ್ತಿ ಜಗತಾಂ ಸ ಚ ಸರ್ಗಕರ್ತಾ |
ಗೋಪಾಲಕೋ ಗಿರಿಧರೋ ನಿಜಬಾಹುವೀರ್ಯಾತ್ !
ತತ್ಪಾದಸಂಸ್ಮರಣತಶ್ಶುಭವೇಃಹಿ ಚಿತ್ತ ! ||

ತಾ|| ಎಲೈ ಮನಸ್ಸೇ! ಚಕ್ರಪಾಣಿಯಾಗಿಯೂ, ಗಂಭೀರಸ್ವಭಾವನಾಗಿಯೂ, ದೇವತೆಗಳಿಗೂ ಅಗೋಚರನಾಗಿಯೂ, ಕಲ್ಪಾಂತಸ್ಥಾಯಿಯಾಗಿಯೂ, ಸಕಲಲೋಕ ಸೃಷ್ಟಿಕರ್ತನಾಗಿಯೂ ಇದ್ದು ಗೋಪಾಲಕನಾಗಿ ದೃಢಬಾಹುವಾಗಿ ಗೋವರ್ಧನಗಿರಿಯನ್ನು ಎತ್ತಿದ ಸ್ವಾಮಿಯ ಪಾದಗಳನ್ನು ಮರೆಯದೆ ನಿತ್ಯವೂ ಸೇವಿಸಿ ಬಾಳು. ಈ ಸುಖಾನುಭವವು ನಿನಗೆ ನಿತ್ಯವೂ ಉಂಟಾಗಲಿ !

(೯) ಕಣ್ಡೇನ್ ಕಮಲಮಲರ್ಪಾದಮ್ ಕಾಣ್ಡಲುಮೇ
ವಿಣ್ಡೇಯೊೞಿನ್ದ ವಿನೈಯಾಯಿನವೆಲ್ಲಾಮ್,
ತೊಣ್ಡೇಶೆಯ್ದೆನ್ಱುಮ್ ತೊೞುದು ವೞಿಯೊೞುಕ,
ಪಣ್ಡೇ ಪರಮನ್ ಪಣಿತ್ತ ಪಣಿವಕೈಯೇ.

ಪ್ರ|| ತೊಣ್ಡೇಶೆಯ್ದು – (ತನ್ನಲ್ಲಿ) ಭಕ್ತಿಯನ್ನೇ ಮಾಡಿ, ಎನ್ಱುಮ್ – ಯಾವಾಗಲೂ, ತೊೞುದು–ಸೇವಿಸಿ, ವೞಿಯೊೞುಕ – ಆಸನ್ಮಾರ್ಗದಲ್ಲೇ ನಡೆಯುವುದಕ್ಕಾಗಿ, ಪಣ್ಡೇ–ಪೂರ್ವಕಾಲದಲ್ಲೇ, ಪರಮನ್–ಸರ್ವೇಶ್ವರನು, ಪಣಿತ್ತ–ಉಪದೇಶಿಸಿದ, ಪಣಿವಕೈಯೇ – ಮನ್ತ್ರರಹಸ್ಯಪ್ರಕಾರದಲ್ಲೇ, ಕಮಲಮಲರ್ ಪಾದಮ್–ತಾವರೆಯ ಪುಷ್ಪದಂತೆ ಇರುವ (ಅವನ) ಪಾದಗಳನ್ನು, ಕಣ್ಡೇನ್–ಕಣ್ಡೆನು. ಕಾಣ್ಡಲುಮೇ–ಕಂಡ ಒಡನೇ, ವಿನೈಯಾಯಿನ ಎಲ್ಲಾಮ್–ಅಹಂಕಾರಮಮಕಾರಾದಿ ಸಕಲ ದುಃಖಗಳೂ, ವಿಣ್ಡೇಒೞಿನ್ದ–ಬಿಟ್ಟೇಹೋದುವು.

( ಸ–ಗಾ–ರ || )—

ಭಕ್ತ್ಯಾ ಭಜನ್ತು ಸತತಂ ಚ ಜನಾ ಇತೀದಂ
ಪ್ರಾಗೇವ ಹಿ ಪ್ರಕಟಿತಂ ಪರಮೇಣ ಪುಂಸಾ |
ವೇದಾನ್ತತತ್ತ್ವಮಿತಿ ತತ್ಕ್ರಮತೋಽದ್ಯ ದೃಷ್ಟಂ
ತತ್ಪಾದಪದ್ಮಯುಗಳಂ ಸಕಲಾಘಶಾನ್ತ್ಯೈ ||

ತಾ|| ಚೇತನರು ತನ್ನನ್ನು ಭಕ್ತಿಯಿಂದ ಸೇವಿಸಿ ಕೃತಾರ್ಥರಾಗಲಿ — ಎಂದು ಪೂರ್ವಕಾಲದಲ್ಲೇ ಸರ್ವೇಶ್ವರನು ಉಪದೇಶಿಸಿದ ಮನ್ತ್ರರಹಸ್ಯದ ರೀತಿಯಲ್ಲೇ ಅವನ ಪಾದಾರವಿನ್ದಗಳನ್ನು ಕಂಡೆನು. ಕಂಡ ಒಡನೇ ಅಹಂಕಾರ ಮಮಕಾರಾದಿ ಸಕಲ ದೋಷಗಳೂ ನಿಶ್ಶೇಷವಾಗಿ ನಷ್ಟವಾದುವು.

(೧೦) ವಕೈಯಾಲ್ ಮನಮೊನ್ಱಿ ಮಾದವನೈ, ನಾಳುಮ್
ಪುಕೈಯಾಲ್ ವಿಳಕ್ಕಾಲ್ ಪೂಮಾಲೈಯಾಲ್ ನೀರಾಲ್,
ತಿಶೈತೋಱಮರರ್ಗಳ್ ಶೆನ್ಱಿಱೈಞ್ಜ ನಿನ್ಱ,
ತಕೈಯಾನ್ ಶರಣಮ್ ತಮರ್ಗಟ್ಕೋರ್ ಪಱ್ಱೇ.

ಪ್ರ॥ ವಕ್ಕೈಯಾಲ್-ಶಾಸ್ತ್ರರೀತಿಯಲ್ಲಿ, ಮನಮ್ ಒನ್ರಿ – ಮನಸ್ಸನ್ನು ಸ್ಥಿರಪಡಿಸಿ, ಮಾದವನ್ನೈ-ಲಕ್ಷ್ಮೀನಾಥನಾದ ಸ್ವಾಮಿಯನ್ನು, ನಾಳುಮ್-ಪ್ರತಿದಿನವೂ, ಪುದುಪುಕೈಯಾಲ್ – ನವೀನವಾದ (ದಿವ್ಯವಾದ) ಧೂಪದಿಂದಲೂ, ವಿಳಕ್ಕಾಲ್ – ದೀಪದಿಂದಲೂ,ಮಲರಾಲ್–ಪುಷ್ಪದಿಂದಲೂ, ನೀರಾಲ್-ತೀರ್ಥದಿಂದಲೂ, ತಿಕ್ಕೈ ತೋಱು – ದಿಕ್ಕುಗಳಲ್ಲೆಲ್ಲಾ, ಅಮರರ್‌ಕಳ್ – ಬ್ರಹ್ಮಾದಿದೇವತೆಗಳು, ಶೆನ್ರು ಇತ್ತೈಞ್ಜ–ಬಂದು ಆಶ್ರಯಿಸುವಂತೆ, ನಿನ್ರ – ಸ್ಥಿರವಾಗಿ ನಿಂತ, ತಕ್ಕೈಯರ್ – ಸ್ವಭಾವವುಳ್ಳ ಸರ್ವೇಶ್ವರನ, ಶರಣಮ್ – ಪಾದಗಳು, ತಮರ್‌ಕಟ್ಕು – ಅವನ ಭಕ್ತರಿಗೆ, ಓರ್–ಒಂದು ಅದ್ವಿತೀಯವಾದ, ಪಱ್ರೇ- ಆಶ್ರಯವು.

( ಸ-ಗಾ-ರ ॥ )—

ಸಮ್ಯೂಜನಾಯ ಚ ಯಥಾವಿಧಿ ಚಿತ್ತದಾರ್ಢ್ಯಾತ್
ಶ್ರೀಮಾಧವಸ್ಯ ಸತತಂ ಶುಭಧೂಪದೀಪ್ಯೈಃ ।
ಪುಷ್ಪೈಶ್ಚ ತೀರ್ಥಸಹಿತೈರಮರಾ ಹಿ ಸಙ್ಗಾ-
ಸ್ಸ್ಯುಸ್ತಸ್ಯ ಪಾದಯುಗಳಂ ಭಜತಾಂ ಶರಣ್ಯಮ್ ॥

ತಾ॥ ಶಾಸ್ತ್ರರೀತಿಯಲ್ಲಿ ಚಿತ್ತದಾರ್ಢ್ಯದಿಂದ ಶ್ರೀ ಮಾಧವನನ್ನು ಪ್ರತಿದಿನವೂ ದಿವ್ಯ ಧೂಪ ದೀಪ ಪುಷ್ಪ ತೀರ್ಥಗಳಿಂದ ಸರ್ವದಿಕ್ಕುಗಳಲ್ಲೂ ಬ್ರಹ್ಮಾದಿ ದೇವತೆಗಳು ಬಂದು ಆರಾಧಿಸುವಂತೆ—ಸ್ಥಿರಭಕ್ತಿಯುಳ್ಳ ಅವನ ಭಕ್ತರಿಗೆ ನಿಶ್ಚಲ ಸ್ವಭಾವನಾದ ಸರ್ವೇಶ್ವರನ ಪಾದಾರವಿನ್ದಯುಗಳವೇ ಶರಣ್ಯವು.

(೧೧) ಪಱ್ಱೆನ್ರು ಪಱ್ಱಿ ಪರಮಪರಮ್ಪರನ್ನೈ,
ಮಱ್ಱಿಣ್ಡೋಳ್ ವೞುದಿವಳನಾಡನ್,
ಶೊಲ್‌ತೊಡೈಯನ್ದಾದಿ ಯೋರಾಯಿರತ್ತುಳಿಪ್ಪತ್ತುಮ್
ಕಱ್ಱಾರ್‌ಕ್ಕೋರ್‌ಪಱ್ಱಾಕುಮ್ ಕಣ್ಣನ್‌ಕೞಲಿಣೈಯೇ.

ಪ್ರ॥ ಪರಮಪರಮ್ಪರನ್ನೈ – ಸರ್ವಶ್ರೇಷ್ಠನಾದ ಪರಾತ್ಪರನಾದ, ಮಲ್–ಮಲ್ಲಯುದ್ಧದಲ್ಲಿ, ತಿಣ್‌ತೋಳ್–ದೃಢವಾದ ತೋಳುಗಳುಳ್ಳ, ಮಾಲೈ–ಆಶ್ರಿತ ವ್ಯಾಮೋಹವುಳ್ಳ ಸರ್ವೇಶ್ವರನನ್ನು, ಪಱ್ಱು ಎನ್ರು-ತಮಗೆ ಆಶ್ರಯವೆಂದು, ಪಱ್ಱಿ – ಭಜಿಸಿ, ವಳವ್ಯಾದಿನಾಡ್ – ಉದಾರವಾದ ತಿರುವ್ಯಾದಿನಾಡಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು, ಶೊಲ್-ಸ್ತುತಿಸಲು ರಚಿಸಿದ, ತೊಡೈ-

ಮಾಲಾರೂಪವಾದ, ಅನ್ತಾದಿ- ಅನ್ತಾದಿ ಪದ್ಯಾತ್ಮಕವಾದ, ಓರ್ ಆಯಿರತ್ತುಳ್- ಒಂದುಸಹಸ್ರ ಪದ್ಯಮಾಲೆಯಲ್ಲಿ, ಇಪ್ಪತ್ತುಮ್- ಈ ದಶಕವನ್ನು, ಕಱ್ಱಾರ್ ಕ್ಕು- ಅಭ್ಯಸಿಸಿದವರಿಗೆ, ಕಣ್ಣನ್- ಕೃಷ್ಣನ, ಕಾೞಿಣೈಯೇ- ಪಾದಯುಗಳವೇ, ಓರ್- ಅದ್ವಿತೀಯವಾದ, ಪಱ್ಱಾಕುಮ್- ಆಶ್ರಯವಾಗುವುದು.

( ಸ-ಗಾ-ರ || )—

ಸಾಕ್ಷಾತ್ಪರಾತ್ಪರಮಮುಂ ದೃಢಬಾಹುಮೀಶಂ
ಪ್ರಾಪ್ತುಂ ಹರಿಂ ವ್ರತಾದಿನಾಡಾದಿತಶ್ಶಠಾರಿಃ |
ಸಾಹಸ್ರಮಾಹ ! ದಶಕಂ ಪಠತಾಂ ತದೇತತ್
ಕೃಷ್ಣಸ್ಯ ಪಾದಯುಗಳಂ ಪರಮಂ ಶರಣ್ಯಮ್ ||

ತಾ|| ಸರ್ವಶ್ರೇಷ್ಠನಾಗಿ ಪರಾತ್ಪರನಾಗಿಯೂ, ದೃಢಬಾಹುವಾಗಿಯೂ, ಆಶ್ರಿತವತ್ಸಲನಾಗಿಯೂ ಇರುವ ಸರ್ವೇಶ್ವರನನ್ನು ಶರಣವನ್ನಾಗಿ ಭಜಿಸಿ ಶ್ರೀ ಕುರುಕಾಪುರಿಯ ಶಠಾರಿಮುನಿಯು ಸ್ತೋತ್ರರೂಪವಾಗಿ ರಚಿಸಿದ ಅನ್ತಾದಿ ಪದ್ಯಾತ್ಮಕವಾದ ಸಹಸ್ರ ಪದ್ಯಮಾಲೆಯಲ್ಲಿ ಈ ದಶಕವನ್ನು ಪಠಿಸುವವರಿಗೆ ಶ್ರೀ ಕೃಷ್ಣನ ಪಾದಯುಗಳವೇ ಅದ್ವಿತೀಯವಾದ ಆಶ್ರಯವು.

( ದ್ರ-ಉ-ಸಂ || )—

ಆಸಕ್ತಿನಿಶ್ಚಯಯುತಃ ಸ್ವಫಲಾಗಮಸ್ಯ
ಸ್ವಾರ್ಥಾತ್ಪರಾರ್ಥಪಥಿರನುಕಮ್ಪಯಾ ಸಃ |
ಉಜ್ಜೀವನಾಯ ಜಗತಾಮುಪದಿಷ್ಟವಾನ್ ಆಂ
ಭಕ್ತಿಂ ಹರೌ ಫಲಯುತಾಂ ನಿಜಗಾದ ತುರ್ಯೇ ||

( ದ್ರ-ಉ-ತಾ-ರ || )—

ಶ್ರೀಮದ್ದಾಮೋದರತ್ವಾದಮರಪರಿಷದಾಮಪ್ಯಗಮ್ಯತ್ವಭೂಮ್ನಾ
ಚಕ್ರಾದ್ಯೇಶಾಯುಧತ್ವಾದ್ವಟದಳಶಯನಾನಾಗರಾಜೇಶಯಿತ್ವಾತ್ |
ವಕ್ಷಸ್ಸ್ವಶ್ರೀರ್ನಿರ್ಮುಖತ್ವಾತ್ ಪರಮಪುರುಷತಾಮಾಧವತ್ವಾದಿಯೋಗಾ-
ದ್ವಿಷ್ಣುಪ್ರಾಪ್ತೋಽಯಂ ಭಜದ್ಭಿಸ್ಸುಗಮ ಇತಿ ದೃಢಂ ಮಾಧವಂ
ಸೋಽಭ್ಯಧತ್ತ ||

(ಈ ಚತುರ್ಥದಶಕದ ಸಾರಾಂಶ—)

ಈ ನಾಲ್ಕನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಸರ್ವೇಶ್ವರನ ಪರತ್ವ - ಭೋಗ್ಯತ್ವಾದಿಮಾಹಾತ್ಮ್ಯವನ್ನು ಅನುಸನ್ಧಿಸಿ, ಅವನೇ ನಿತ್ಯಸೂರಿ ಸಂಕೀರ್ತ್ಯನೆಂದೂ, ಲೀಲಾವಿಭೂತಿನಾಯಕನೆಂದೂ, ನೀಳಾವಲ್ಲಭನಾದ ಶ್ರೀಕೃಷ್ಣನೆಂದೂ, ಅವನೇ ವಟಪತ್ರಶಾಯಿಯಾಗಿಯೂ, ಶ್ರೀಶೈಲವಾಸಿಯಾಗಿಯೂ, ಶೇಷಶಾಯಿಯಾಗಿಯೂ, ಭಕ್ತವತ್ಸಲನಾಗಿಯೂ ಇರುವನೆಂದೂ, ಅವನೇ ಮಧುಸೂದನನೆಂದೂ, ಚಕ್ರಪಾಣಿಯೆಂದೂ, ಗೋವರ್ಧನೋದ್ಧಾರಕನೆಂದೂ, ಮನ್ತ್ರಾರ್ಥೋಪದೇಶಕನೆಂದೂ, ಬ್ರಹ್ಮಾದಿದೇವಸಮರ್ಚ್ಯನೆಂದೂ ವರ್ಣಿಸಿ, ಈ ದಶಕಪಠನದಿಂದ ಶ್ರೀ ಕೃಷ್ಣನ ಪಾದಯುಗಳವು ಪ್ರಾಪ್ಯವೆಂದು ಬೋಧಿಸಿ ಇರುತ್ತಾರೆ.

—❀—

## ಶ್ರೀಃ

# ದಶಮಶತಕದಲ್ಲಿ—ಪಞ್ಚಮದಶಕ.

(ಕಣ್ಣನ್ ಕೞಲಿಣೈ —)

(ಈ ದಶಕದಲ್ಲಿ-ಭಕ್ತಿಯೋಗನಿಷ್ಠೆಯ ಫಲವು ವರ್ಣಿಸಲ್ಪಡುತ್ತದೆ.)

---

(೧) ಕಣ್ಣನ್ ಕೞಲಿಣೈ ನಣ್ಣುಮ್ ಮನಮುಡೈಯೀರ್ ।
ಎಣ್ಣುಮ್ ತಿರುನಾಮಮ್ । ತಿಣ್ಣಮ್ ನಾರಣಮೇ ॥

ಪ್ರ॥ ಕಣ್ಣನ್-(ಸರ್ವಸುಲಭನಾದ) ಕೃಷ್ಣನ, ಕೞಲ್ ಇಣೈ—ಪಾದಗಳೆರಡನ್ನೂ, ನಣ್ಣುಮ್-ಆಶ್ರಯಿಸುವ, ಮನಮ್ - ಮನಸ್ಸನ್ನು, ಉಡೈಯೀರ್-ಉಳ್ಳವರಾದ ನೀವು, ಎಣ್ಣುಮ್-ಸ್ಮರಿಸಲು ಯೋಗ್ಯವಾದ, ತಿರುನಾಮಮ್-ನಾಮಧೇಯವು, ತಿಣ್ಣಮ್-ನಿಶ್ಚಯವಾಗಿ, ನಾರಣಮೇ-ನಾರಾಯಣಶಬ್ದವೇ.

( ಸ-ಗಾ-ರ )—

ಕೃಷ್ಣಪಾದಾಮ್ಬುಜದ್ವನ್ದ್ವಂ ಪ್ರಾಪ್ತುಂ ಕುತುಕಿನಾನ್ತು ವಃ ।
ಚಿನ್ತನೀಯಂ ಸದಾ ನಾಮ ನಾರಾಯಣ ಇತಿ ಧ್ರುವಮ್ ॥

ತಾ॥ ಸರ್ವಸುಲಭನಾದ ಕೃಷ್ಣನ ಪಾದಗಳೆರಡನ್ನೂ ಆಶ್ರಯಿಸಲು ಮನಸ್ಸುಳ್ಳವರಾದ ನೀವು ಸ್ಮರಿಸುವುದಕ್ಕೆ ಯೋಗ್ಯವಾದ ನಾಮಧೇಯವು ನಾರಾಯಣ ನಾಮವೇ.

(೨) ನಾರಣನೆಮ್ಮಾನ್ । ಪಾರಣಙ್ಗಾಳನ್ ।
ವಾರಣಮ್ ತೊಲೈತ್ತ । ಕಾರಣಮ್ ತಾನೇ ॥

ಪ್ರ॥ ನಾರಣನ್-ನಾರಾಯಣನು, ಎಮ್ಮಾನ್-ನಮ್ಮ ಸ್ವಾಮಿಯಾಗಿ, ಪಾರ್ ಅಣಙ್ಗು ಆಳನ್-ಭೂದೇವಿಗೆ ವಲ್ಲಭನಾಗಿ ನಿತ್ಯವಿಭೂತಿನಾಥನಾದವನು, ವಾರಣಮ್ ತೊಲೈತ್ತ-ಕುವಲಯಾಪೀಡವೆಂಬ ಆನೆಯನ್ನು ಧ್ವಂಸಮಾಡಿದ, ಕಾರಣಮ್ ತಾನೇ-ಜಗತ್ಕಾರಣಭೂತನಾದ ಕೃಷ್ಣನೇ.

( ಸ-ಗಾ-ರ ॥ )—

ನಾರಾಯಣೋಽಸ್ಮದೀಶೋಽಯಂ ಭೂದೇವೀವಲ್ಲಭೋ ಹರಿಃ ।
ಮತ್ತವಾರಣವಿಧ್ವಂಸೀ ಕಾರಣಂ ಜಗತಾಂ ಸ್ವಯಮ್ ॥

ತಾ॥ ನಾರಾಯಣನು ನಮಗೆ ಸ್ವಾಮಿಯಾಗಿಯೂ ಭೂದೇವಿಗೆ ವಲ್ಲಭನಾಗಿಯೂ ನಿತ್ಯವಿಭೂತಿನಾಥನಾಗಿಯೂ ಇದಾನೆ. ಅವನೇ ಅವತಾರಮಾಡಿ ಕುವಲಯಾಪೀಡವೆಂಬ ಆನೆಯನ್ನು ಕೊಂದ ಜಗತ್ಕಾರಣಭೂತನಾದ ಕೃಷ್ಣನು.

(೩) ತಾನೇ ಯುಲಕೆಲ್ಲಾಮ್ । ತಾನೇ ಪಡೈತ್ತಿಡನ್ದು ।
ತಾನೇ ಯುಣ್ಡುಮಿಳ್ನ್ದು । ತಾನೇ ಯಾಳ್ವಾನೇ ॥

ಪ್ರ॥ ತಾನೇ-ನಾರಾಯಣನಾದ ತಾನೇ, ಉಲಕು ಎಲ್ಲಾಮ್-ಸಕಲ ಲೋಕಗಳನ್ನೂ, ತಾನೇ ಪಡೈತ್ತು-ತಾನೊಬ್ಬನೇ ಸೃಷ್ಟಿಸಿ, ಇಡನ್ದು-(ವರಾಹರೂಪಿಯಾಗಿ) ಉದ್ಧರಿಸಿ, ತಾನೇ ಉಣ್ಡು-ತಾನೇ ಭಕ್ಷಿಸಿ, ಉಮಿಳ್ನ್ದು - ಅನನ್ತರ ಉಗಿದು ಪುನಃ ಉದ್ಭವಿಸುವಂತೆ ಮಾಡಿ, ತಾನೇ ಆಳ್ವಾನೇ-ಸರ್ವೇಶ್ವರನಾದ ತಾನೇ ಆಳುವವನಾಗಿದಾನೆ.

( ಸ-ಗಾ-ರ ॥ )—

ಸ್ವಯಮೇವ ಜಗತ್ಸರ್ವಂ! ಸೃಷ್ಟ್ವಾ ಚೋದ್ಧೃತ್ಯ ತತ್ ಸ್ವಯಮ್ ।
ಭುಕ್ತ್ವಾ ಚ ಪುನರುದ್ಗೀರ್ಯ ಸರ್ವಂ ರಕ್ಷತಿ ಚ ಸ್ವಯಮ್ ॥

ತಾ॥ ನಾರಾಯಣನು ತಾನೇ ಸಕಲ ಲೋಕಾತ್ಮಕನಾಗಿ ಸಕಲ ಲೋಕಗಳನ್ನೂ ಸೃಷ್ಟಿಸಿ, ಉದ್ಧರಿಸಿ, ಭಕ್ಷಿಸಿ, ಪುನಃ ಉದ್ಭವಿಸುವಂತೆ ಮಾಡಿ ಅವುಗಳನ್ನು ಆಳುವವನಾಗಿದಾನೆ.

(೪) ಆಳ್ವಾನಾತ್ತಿನೀರ್ | ಕೋಳ್ವಾಯರವಣೈಯಾನ್ |
ತಾಳ್ವಾಯ್ ಮಲರಿಟ್ಟು | ನಾಳ್ವಾಯ್ ನಾಡೀರೇ ||

ಪ್ರ|| ಆತ್ತಿನೀರ್-ಏಕಾರ್ಣವವಾದ ಕಾರಣಜಲದಲ್ಲಿ, ಕೋಳ್‌ವಾಯ್-ಬಲಿಷ್ಠನಾಗಿ ಸ್ತೋತ್ರಮಾಡಲು ಅನೇಕ ವಕ್ತ್ರಗಳುಳ್ಳವನಾದ, ಅರವು-ಆದಿಶೇಷನನ್ನು, ಅಣೈಯಾನ್ - ಶಯನವಾಗಿ ಉಳ್ಳ, ಆಳ್ವಾನ್ - ಜಗನ್ನಿರ್ವಾಹಕನಾದ ಸ್ವಾಮಿಯ, ತಾಳ್‌ವಾಯ್-ಪಾದಗಳಲ್ಲಿ, ಮಲರ್ ಇಟ್ಟು-ಪುಷ್ಪಗಳನ್ನು ಸಮರ್ಪಿಸಿ, ನಾಳ್‌ವಾಯ್-ಪ್ರತಿದಿನವೂ, ನಾಡೀರೇ-ಭಕ್ತಿಯೊಡನೆ ಆಶ್ರಯಿಸಿರಿ.

( ಸ-ಗಾ-ರ || )—

ಶೇಷೇ ಸ್ತೋತ್ರಾರ್ಹಸದ್ವಕ್ತ್ರೇ ಶಯಾನಂ ಕಾರಣಾರ್ಣವೇ |
ರಕ್ಷಕಂ ಪ್ರಾಪ್ಯ ತತ್ಪಾದೌ ಪುಷ್ಪೈರರ್ಚಯತಾನಿಶಮ್ ||

ತಾ|| ಏಕಾರ್ಣವವಾದ ಕಾರಣಜಲದಲ್ಲಿ ತನ್ನನ್ನು ಸ್ತೋತ್ರಮಾಡುವುದಕ್ಕೆ ತಕ್ಕ ಅನೇಕ ವಕ್ತ್ರಗಳುಳ್ಳ ಆದಿಶೇಷನಮೇಲೆ ಶಯನಮಾಡಿರುವ ಜಗನ್ನಾಥನಾದ ಸ್ವಾಮಿಯ ಪಾದಗಳಲ್ಲಿ ಪುಷ್ಪಗಳನ್ನು ಸಮರ್ಪಿಸಿ ಪ್ರತಿದಿನವೂ ಭಕ್ತಿಯೊಡನೆ ಆರಾಧಿಸಿರಿ.

(೫) ನಾಡೀರ್ ನಾಳ್‌ತೋಱುಮ್ | ವಾಡಾ ಮಲರ್‌ಕೊಣ್ಡು |
ಪಾಡೀರವನ್ ನಾಮಮ್ | ವೀಡೇ ಪೆಱಲಾಮೇ ||

ಪ್ರ|| ನಾಳ್‌ತೋಱುಮ್-ಪ್ರತಿದಿನವೂ, ವಾಡಾ-ಬಾಡದೆ ಇರುವ, ಮಲರ್ ಕೊಣ್ಡು-ಪುಷ್ಪಗಳನ್ನು ಎತ್ತಿಕೊಂಡು, ನಾಡೀರ್-(ನೀವು) ಆರಾಧಿಸಿರಿ. (ಮತ್ತು) ಅವನ್‌ನಾಮಮ್ - ಅವನ ನಾಮಧೇಯವನ್ನು, ಪಾಡೀರ್ - ಹಾಡಿರಿ. ಅದೇ (ಆಸಾಮಗಾನವೇ), ವೀಡೇ-ಮೋಕ್ಷವಾಗಿ, ಪೆಱಲಾಮೇ - ಫಲವನ್ನು ಹೊಂದಬಹುದಷ್ಟೆ !

( ಸ-ಗಾ-ರ || )—

ನವ್ಯೈಃ ಪ್ರತಿದಿನಂ ಪುಷ್ಪೈರಾರಾಧಯತ ತಂ ಹರಿಮ್ |
ತನ್ನಾಮ ಗಾಯತ ಪ್ರೀತ್ಯಾ! ಮೋಕ್ಷ ಏವ ಭವೇದ್ಧ್ರುವಮ್ ||

ತಾ|| ಪ್ರತಿದಿನವೂ ನೀವು ಬಾಡದೆ ಇರುವ (ನೂತನವಾದ) ಪುಷ್ಪಗಳಿಂದ ಭಗವಂತನನ್ನು ಆರಾಧಿಸಿರಿ. ಅವನ ನಾಮಧೇಯವನ್ನು ಸಂಕೀರ್ತನಮಾಡಿ ಹಾಡಿರಿ. ಅದೇ ಸಾಮಗಾನವಾಗಿ ಮೋಕ್ಷಫಲವಾಗುವುದಷ್ಟೆ !

(೬) ಮೇಯಾನ್ ವೇಙ್ಗಡವನ್ । ಕಾಯಾ ಮಲರ್ ವಣ್ಣನ್ ।
ಪೇಯಾರ್ ಮುಲೈಯುಣ್ಡ । ವಾಯಾನ್ ಮಾದವನೇ ॥

ಪ್ರ॥ ಕಾಯಾಮಲರ್-ಅತಸೀಕುಸುಮದಂತೆ ಶ್ಯಾಮಳವಾದ, ಮಣ್ಣನ್ - ಬಣ್ಣವುಳ್ಳವನಾಗಿ, ಪೇಯ್ - ಪೂತನೆಯ, ಆರ್ - ವಿಷಭರಿತವಾದ, ಮುಲೈ - ಸ್ತನಗಳನ್ನು ಉಣ್ಡ-ಹೀರಿದ, ವಾಯನ್ - ಬಾಯುಳ್ಳವನಾದ, ಮಾದವನೇ - ಲಕ್ಷ್ಮೀನಾಥನೇ, ವೇಙ್ಗಡನ್-ವೇಙ್ಕಟಾದ್ರಿಯೆಂಬ ತಿರುಪತಿಯಲ್ಲಿ, ಮೇಯಾನ್-ನಿತ್ಯವಾಸಮಾಡುವವನಾಗಿದಾನೆ.

(ಸ-ಗಾ-ರ ॥)—

ಅತಸೀಗುಚ್ಛಸಚ್ಛಾಯಃ ಪೂತನಾಸ್ತನ್ಯಪಾನಕೃತ್ ।
ನಿತ್ಯಂ ವಸತಿ ಹಿ ಪ್ರೀತ್ಯಾ ಮಾಧವೋ ವೇಙ್ಕಟಾಚಲೇ ॥

ತಾ॥ ಅತಸೀಕುಸುಮದಂತೆ ಶ್ಯಾಮಳವರ್ಣನಾದ ಪೂತನಾಸ್ತನ್ಯಪಾನ ಮಾಡಿದ ಮಾಧವನೇ ವೇಂಕಟಾದ್ರಿಯಲ್ಲಿ ನಿತ್ಯವಾಸಮಾಡುವ ಸ್ವಾಮಿಯು.

(೭) ಮಾದವನೆನ್ರೆನ್ರು । ಓದವಲ್ಲೀರೇಲ್ ।
ತೀದೊನ್ರುಮಡೈಯಾ । ಏದಮ್ ಶಾರಾವೇ ॥

ಪ್ರ॥ ಮಾದವನ್ - ಲಕ್ಷ್ಮೀನಾಥನು, ಎನ್ರು ಎನ್ರು - ಆಶ್ರಯಣೀಯನೂ ಪುರುಷಾರ್ಥಭೂತನೂ ಎಂದು ಅನೇಕಾವೃತ್ತಿ, ಓದವಲ್ಲೀರೇಲ್ - ನೀವು ಹೇಳ ಬಲ್ಲವರಾದರೆ, ತೀದು ಒನ್ರುಮ್ - ಪಾಪಗಳಲ್ಲಿ ಒಂದಾದರೂ, ಅಡೈಯಾ-ನಿಮ್ಮ ಸಮೀಪಕ್ಕೆ ಬರಲಾರದು, ಏದಮ್ ಶಾರಾವೇ - ಯಾವ ಪಾಪಕೃತ್ಯಗಳೂ ನಿಮ್ಮ ಸಮೀಪಕ್ಕೆ ಬರಲಾರವು.

(ಸ-ಗಾ-ರ ॥)—

ಮಾಧವಸ್ಯ ಶುಭಂ ನಾಮ ಸಙ್ಕೀರ್ತಯಥ ಚೇತ್ ಸ್ವಯಮ್ ।
ಭೂತಂ ಭವ್ಯಂ ಚ ಪಾಪಂ ವಸ್ಸಮ್ಭವೇನ್ನೈವ ಜಾತು ಚಿತ್ ॥

ತಾ॥ ಲಕ್ಷ್ಮೀನಾಥನಾದ ಸ್ವಾಮಿಯೇ ಸರ್ವಾಶ್ರಯಣೀಯನಾಗಿಯೂ ಪುರುಷಾರ್ಥ ಭೂತನಾಗಿಯೂ ಇದಾನೆಂದು ಅನೇಕಾವೃತ್ತಿ ಅವನ ನಾಮವನ್ನೇ ಹೇಳ ಬಲ್ಲವರಿಗೆ ಒಂದುಪಾಪವೂ ಸಮೀಪಿಸಲಾರದು. ನಿಮ್ಮ ಸಮೀಪಕ್ಕೆ ಯಾವ ಪಾಪಕೃತ್ಯಗಳೂ ಬರಲಾರವು.

(೮) ಶಾರಾ ಏದಙ್ಗಳ್ | ನೀರಾರ್ ಮುಕಿಲ್ವಣ್ಣನ್ |
ಪೇರಾರೋದುವಾರ್ | ಆರಾರಮರರೇ ||

ಪ್ರ|| ಏದಙ್ಗಳ್-ದುಃಖಗಳು, ಶಾರಾ - ಸಮೀಪಕ್ಕೆ ಬರಲಾರವು. ನೀರ್ ಆರ್-ಜಲಭರಿತವಾದ, ಮುಕಿಲ್-(ನೀಲ) ಮೇಘದಂತೆ, ವಣ್ಣನ್-ಬಣ್ಣವುಳ್ಳವನ, ಪೇರ್-ನಾಮಧೇಯವನ್ನು, ಆರಾರ್ – ಅನುಸನ್ಧಿಸುವ ಶಕ್ತಿಯುಳ್ಳವರಾಗಿ, ಆರ್-ಯಾರು, ಓದುವಾರ್-ಹೇಳುವರೋ, (ಅವರೇ) ಅಮರರೇ-ನಿತ್ಯಸೂರಿಗಳು.

( ಸ-ಗಾ-ರ || )—

ನೋಪಸರ್ಪನ್ತಿ ದುಃಖಾನಿ! ನೀಲಾಮ್ಬುದನಿಭಸ್ಯತತ್ |
ನಾಮ ಯೇ ಕೀರ್ತಯನ್ತ್ಯೇತೇ ಸರ್ವೇ ಸ್ಯುರಮರಾ ಸ್ಸ್ವಯಮ್ ||

ತಾ|| ಯಾವ ದುಃಖಗಳೂ ಬರಲಾರವು. ನೀಲಮೇಘವರ್ಣನ ನಾಮಧೇಯವನ್ನು ಅನುಸನ್ಧಿಸುವ ಶಕ್ತಿಯುಳ್ಳ ಮಹಾತ್ಮರೇ ನಿತ್ಯಸೂರಿಗಳು.

(೯) ಅಮರರ್ಕ್ಕರಿಯಾನೈ | ತಮರ್ಕಳ್ಕ್ಕೆಳಿಯಾನೈ |
ಅಮರ ತ್ತೊೞುವಾರ್ಕಳ್ಕ್ಕ | ಅಮರಾ ವಿನೈಕಳೇ.

ಪ್ರ|| ಅಮರರ್ಕ್ಕು-ಬ್ರಹ್ಮಾದಿ ದೇವತೆಗಳಿಗೆ, ಅರಿಯಾನೈ-ದುರ್ಲಭನಾದವನನ್ನು, ತಮರ್ಕಳ್ಕು-ಭಕ್ತರಿಗೆ, ಎಳಿಯಾನೈ-ಸುಲಭನಾದವನನ್ನು, ಅಮರ – ಆದರದಿಂದ, ತ್ತೊೞುವಾರ್ಕಳ್ಕು – ಸೇವಿಸುವವರಿಗೆ, ವಿನೈಕಳ್ – ಪಾಪಗಳು, ಅಮರಾ ಏ-ಸಮೀಪಿಸಲೇ ಆರವು.

( ಸ-ಗಾ-ರ || )—

ದೇವಾನಾಂ ದುರ್ಲಭಂ ವಿಷ್ಣುಂ ಭಕ್ತಾನಾಂ ಸುಲಭಂ ಹರಿಮ್ |
ಯೇ ಭಜನ್ತಿ ಸ್ವಯಂ ಪ್ರೀತ್ಯಾ ತೇಷಾಂ ಪಾಪಂ ನ ಸಮ್ಭವೇತ್ ||

ತಾ|| ಬ್ರಹ್ಮಾದಿ ದೇವತೆಗಳಿಗೆ ದುರ್ಲಭನಾಗಿಯೂ, ತನ್ನ ಭಕ್ತರಿಗೆ ಸುಲಭನಾಗಿಯೂ ಇರುವ ಸ್ವಾಮಿಯನ್ನು ಆದರದಿಂದ ಸೇವಿಸುವವರಿಗೆ ಯಾವ ಪಾಪಗಳೂ ಉಂಟಾಗಲಾರವು.

(೧೦) ವಿನೈವಲ್ಲಿರುಳೆನ್ನುಮ್ | ಮುನೈಕಳ್ ವೆರುವಿ ಪ್ಪೋಮ್ |
ಶುನೈನನ್ ಮಲರಿಟ್ಟು | ನಿನೈಮಿನ್ ನೆಡಿಯಾನೇ ||

ಪ್ರ|| ವಿನೈ-ಪಾಪಗಳೂ, ವಲ್ ಇರುಳ್ – ಪ್ರಬಲವಾದ ಅಜ್ಞಾನವೂ, ಎನ್ನುಮ್-ಎಂಬ, ಮುನೈಕಳ್ - ಸಂಸಾರಬನ್ಧರುಚಿ ವಾಸನಾದಿಗಳು, ವೆರುವಿ

ಪ್ಪೋವಮ್–ತಾವೇ ಭಯದಿಂದ ಓಡಿಹೋಗುವುವು. ಶುನ್ಯೈ – ಜಲಪ್ರದೇಶಗಳಲ್ಲಿರುವ, ನ್ನ ಮಲರಿಟ್ಟು–ಒಳ್ಳೇ ಪುಷ್ಪಗಳನ್ನು ಸಮರ್ಪಿಸಿ, ನೆಡಿಯಾನೇ – ಭಕ್ತವತ್ಸಲನಾದ ಸ್ವಾಮಿಯನ್ನೇ, ನಿನ್ನೈಮಿನ್–ಸ್ಮರಿಸಿರಿ.

( ಸ–ಗಾ. ರ || )—

ಪಲಾಯನ್ತೇ ಹಿ ಪಾಪಾನಿ ಚಾಜ್ಞಾನ–ರುಚಿ–ವಾಸನಾಃ |
ಆರಾಧ್ಯ ನೂತನೈಃ ಪುಷ್ಪೈರ್ನಾಥಂ ಚಿನ್ತಯತಾನಿಶಮ್ ||

ತಾ|| ಸಕಲ ಪಾಪಗಳೂ, ಪ್ರಬಲವಾದ ಅಜ್ಞಾನವೂ, ಸಂಸಾರಬನ್ಧರುಚಿ ವಾಸನಾದಿಗಳೂ—ಎಲ್ಲವೂ ತಾವೇ ಭಯದಿಂದ ಓಡಿಹೋಗುವುವು. ನೀವು ಜಲಪ್ರದೇಶಗಳಲ್ಲಿರುವ ಒಳ್ಳೇ ಪುಷ್ಪಗಳನ್ನು ಸಮರ್ಪಿಸಿ ಭಕ್ತವತ್ಸಲನಾದ ಸ್ವಾಮಿಯನ್ನೇ ಸ್ಮರಿಸಿ ಆರಾಧಿಸಿರಿ.

(೧೧) ನೆಡಿಯಾನರುಳ್ ಶೂಡುಮ್| ಪಡಿಯಾನ್ ಶಡಕೋಪನ್ |
ನೊಡಿಯಾಯಿರತ್ತಿಪ್ಪತ್ತು| ಅಡಿಯಾರ್ಕ್ಕರುಳ್ ಪೇಱೇ ||

ಪ್ರ|| ನೆಡಿಯಾನ್–ಸರ್ವೇಶ್ವರನ, ಅರುಳ್–ಕೃಪೆಯನ್ನು, ಶೂಡುಮ್–ಶಿರಸಾವಹಿಸುವ, ಪಡಿಯಾನ್–ಸ್ವಭಾವವುಳ್ಳವರಾದ, ಶಡಕೋಪನ್–ಶ್ರೀಶಠಾರಿಮುನಿಯು, ನೊಡಿ–ಸೂಕ್ತಿಮಾಲೆಯಾದ, ಆಯಿರತ್ತು–ಸಹಸ್ರಪದ್ಯಮಾಲೆಯಲ್ಲಿ, ಇಪ್ಪತ್ತು–ಈ ದಶಕವು, ಅಡಿಯಾರ್ಕ್ಕು – ಭಗವದ್ಭಕ್ತರಿಗೆ, ಅರುಳ್ಪೇಱು – ಪ್ರಸಾದಫಲವಾಗಿರುವುದು.

( ಸ–ಗಾ–ರ || )—

ಶ್ರೀಪತೇಃ ಕರುಣಾಪಾತ್ರಂ ಶಠಾರಿರವದನ್ಮುನಿಃ |
ಸಾಹಸ್ರೇ ದಶಕಂ ಚೇದಂ ಭಕ್ತಾನಾಂ ಫಲಮುತ್ತಮಮ್ ||

ತಾ|| ಸರ್ವೇಶ್ವರನ ಕೃಪೆಯನ್ನು ಶಿರಸಾವಹಿಸುವ ಶ್ರೀ ಶಠಾರಿಮುನಿಯು ರಚಿಸಿದ ಸಹಸ್ರಪದ್ಯಾವಳಿಯಲ್ಲಿ ಈ ದಶಕವು ಭಗವನ್ತನ ಭಕ್ತರಿಗೆ ಅನುಗ್ರಹದ ಫಲವಾಗಿರುವುದು.

( ದ್ರ–ಉ–ಸಂ || )—

ಕೃಷ್ಣಸ್ಯ ಪಾದಯುಗಳಂ ಪ್ರತಿಭಾವನೀಯಂ
ಜಿಜ್ಞಾಸಿತಂ ಜಗತಿ ಭಕ್ತಿಸಮುತ್ಸುಕಾನಾಮ್ |
ಪ್ರಾಪ್ತಾತ್ತ್ವರಾತಿಶಯವಾನ್ ಮಿತಸೂಕ್ತಿಜಾಲೈ–
ರ್ಭಕ್ತೇಶ್ವರೀರಮಪಿ ಪಞ್ಚಮತೋ ಜಗಾದ ||

( ದ್ರ-ಉ-ತಾ-ರ ॥ )—

ನಾಮ್ನಾಂ ಸಙ್ಕೀರ್ತನೇನ ಸ್ವಪರಿಬೃಢತಯಾ ಭಾವನಾತೋಽನುವೇಲಂ
ಸಂಸ್ಕೃತ್ಯಾ ಪುಷ್ಪದಾನಾಧ್ಯಯನನಿವಚನೈಃ ಸ್ತೋತ್ರನೃತ್ತಾದಿಕೃತ್ಯೈಃ ।
ಧರ್ಮೈರ್ವರ್ಣಾಶ್ರಮೋಕ್ತೈರ್ಬಹುವಿಧಭಜನಪ್ರಕ್ರಿಯೋ ದೀರ್ಘಬನ್ಧುಃ
ಶ್ರೀಮಾನ್ನಾರಾಯಣಶ್ಶ್ರೇತ್ಯಕಥಯದಖಿಲದ್ರಾವಿಡಬ್ರಹ್ಮದರ್ಶೀ ॥

(ಈ ಪಞ್ಚಮದಶಕದ ಸಾರಾಂಶ—)

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಕ್ತಿಯೋಗನಿಷ್ಠೆಯ ಪ್ರಕಾರವನ್ನು ನಿರೂಪಿಸಲಾರಂಭಿಸಿ, ನಾರಾಯಣನಾಮವೇ ಸ್ಮರಣೀಯ ವೆಂತಲೂ, ನಾರಾಯಣನೇ ಅವತರಿಸಿ ಕೃಷ್ಣನಾಗಿ ದುಷ್ಟಗಜವನ್ನು ಕೊಂದ ನೆಂತಲೂ, ಅವನೇ ಸಕಲಲೋಕ ಸೃಷ್ಟಿಸ್ಥಿತಿಲಯಾದಿಗಳನ್ನು ಮಾಡುತ್ತಿದ್ದಾ ನೆಂತಲೂ, ಶೇಷಶಾಯಿಯಾದ ಅವನನ್ನೇ ಭಕ್ತಿಯಿಂದ ಆರಾಧಿಸಬೇಕೆಂತಲೂ ಅವನ ನಾಮಗಾನವನ್ನೇ ಮಾಡಬೇಕೆಂತಲೂ, ಅವನೇ ವೇಂಕಟಾದ್ರಿನಾಥ ನೆಂತಲೂ, ಅವನ ನಾಮಸ್ಮರಣವುಳ್ಳ ಭಕ್ತರಿಗೆ ಯಾವ ಪಾಪವೂ ಸಂಭವಿಸಲಾರ ದೆಂತಲೂ, ಅವನ ಭಕ್ತರಿಗೆ ಸಂಸಾರಬನ್ಧವಿಮೋಚನವಾಗುವುದೆಂತಲೂ ವರ್ಣಿಸಿ, ಈ ದಶಕಪಠನದಿಂದ ಅನುಗ್ರಹಫಲಪ್ರಾಪ್ತಿಯೆಂದು ಪ್ರತಿಪಾದಿಸಿ ಇರುತ್ತಾರೆ.

——:❖:——

## ಶ್ರೀಃ

# ದಶಮಶತಕದಲ್ಲಿ—ಷಷ್ಠದಶಕ.

(ಅರುಳ್‌ಪೆಱುವಾರ್—)

ಈ ದಶಕದಲ್ಲಿ—ಭಗವನ್ತನ ಮಹೋಪಕಾರಕತ್ವವು ವರ್ಣಿಸಲ್ಪಡುತ್ತದೆ.
(ಈ ದಶಕವು ಮಲೈಯಾಳದಲ್ಲಿರುವ ತಿರುವಾಟ್ಟಾಱು—ಎಂಬ ದಿವ್ಯದೇಶದ ಸ್ತೋತ್ರರೂಪವಾದುದು.)

(೧) ಅರುಳ್‌ಪೆಱುವಾರಡಿಯಾರ್ ತಮ್ಮಡಿಯನೇಱ್ಕು, ಆೞಿಯಾನ್
ಅರುಳ್‌ತರುವಾನಮೈಕಿನ್ಱನದು ನಮದುವಿದಿವಕೈಯೇ,
ಇರುಳ್‌ತರುಮಾಞಾಲತ್ತುಳಿನಿಪ್ಪಿಱವಿ ಯಾನ್‌ವೇಣ್ಡೇನ್,
ಮರುಳೊೞಿ ನೀ ಮಡನೆಞ್ಜೇ ವಾಟ್ಟಾಱ್ಱಾನಡಿವಣಙ್ಗೇ.

ಪ್ರ|| ಅರುಳ್-ತನ್ನ ಅನುಗ್ರಹವನ್ನು, ಪೆಱುವಾರ್-ಹೊಂದಲು ಯೋಗ್ಯರಾದ, ಅಡಿಯಾರ್‌ತಮ್-ಭಕ್ತರಿಗೆ, ಅಡಿಯನೇಱ್ಕು - ದಾಸಭೂತನಾದ ನನಗೆ, ಆೞಿಯಾನ್ - ಚಕ್ರಪಾಣಿಯಾದ ಸ್ವಾಮಿಯು, ಅರುಳ್-ಮಹೋಪಕಾರವನ್ನು, ತರುವಾನ್-ಮಾಡುವವನಾಗಿ, ಅಮೈಕಿನ್ಱಾನ್-(ತನ್ನ ಮಹಿಮೆಗೆ) ಅನುರೂಪ್ಯವುಳ್ಳವನಾಗಿದಾನೆ. ಅದು-ಆ ಉಪಕಾರವು, ನಮದುವಿದಿವಕ್ಕೈಯೇ - ನಮ್ಮ ಇಷ್ಟ ಪ್ರಕಾರ ನಮ್ಮ ಆಜ್ಞಾನುಸಾರವಾಗಿರುವುದು. (ಆದುದರಿಂದ) ಇರುಳ್‌ತರು-ಅಜ್ಞಾನಾನ್ಧಕಾರವು ಹರಡಿಕೊಂಡಿರುವ, ಮಾ ಞಾಲತ್ತುಳ್ - ವಿಶಾಲವಾದ ಭೂಮಿಯಲ್ಲಿ, ಇನಿ-ಅವನ ಅನುಗ್ರಹವಂ ಪಡೆದಮೇಲೆ, ಪಿಱವಿ-ಜನ್ಮವನ್ನೂ, ಯಾನ್‌ವೇಣ್ಡೇನ್-ನಾನು ಅಪೇಕ್ಷಿಸುವುದಿಲ್ಲ. ಮಡನೆಞ್ಚೇ-ಚಪಲವಾದ ಮನಸ್ಸೇ! ಮರುಳ್-ಅಜ್ಞಾನವನ್ನು, ನೀ ಒೞಿ-ನೀನು ಬಿಡು. ವಾಟ್ಟಾಱ್ಱಾನ್-ತಿರುವಾಟ್ಟಾಱು ಎಂಬ ದಿವ್ಯಕ್ಷೇತ್ರದ ಸ್ವಾಮಿಯ, ಅಡಿ-ಪಾದಗಳನ್ನು, ವಣಙ್ಗೇ-ನಮಸ್ಕರಿಸು.

( ಸ-ಗಾ-ರ || )—

ಕಾರುಣ್ಯಾಶ್ರಯಭಕ್ತವರ್ಯಸರಣೇರ್ದಾಸಸ್ಯ ಮೇ ಶ್ರೀಹರಿ-
ಶ್ಚಕ್ರೀ ಸ್ವಾಂ ಕರುಣಾಂ ಪ್ರದರ್ಶಯತಿ ಚ ಸ್ವಾಭೀಷ್ಟರೀತ್ಯಾ ಮಮ |
ನಾಹಂ ಜನ್ಮ ತು ಕಾಮಯೇಽತ್ರ ವಿಪುಲೇ ಮೋಹಾವಹೇ ಭೂತಲೇ !
ಭ್ರಾನ್ತಿಂ ಸನ್ತ್ಯಜ ಮಾನಸಾದ್ಯ ಚಪಲ! ಪ್ರಾಪ್ಯೈವ ವಾಟ್ಟಾರ್-
ಪ್ರಭುಮ್ ||

ತಾ|| ಚಕ್ರಪಾಣಿಯಾದ ಸ್ವಾಮಿಯು ತನ್ನ ಭಕ್ತರಿಗೆ ದಾಸಭೂತನಾದ ನನಗೆ ಮಹೋಪಕಾರವನ್ನು ಮಾಡುವವನಾಗಿ ತನ್ನ ಮಹಿಮೆಗೆ ತಕ್ಕಂತೆ ಇದಾನೆ. ಆ ಉಪಕಾರವು ನಮ್ಮ ಇಷ್ಟಾನುಸಾರವಾಗಿರುವುದು. ಆದುದರಿಂದ ಅಜ್ಞಾನಾವೃತವಾದ ಈ ಭೂಮಿಯಲ್ಲಿ ಅವನ ಅನುಗ್ರಹವಂ ಪಡೆದಮೇಲೆ ನಾನು ಜನ್ಮವನ್ನು ಅಪೇಕ್ಷಿಸುವುದಿಲ್ಲ. ಚಪಲವಾದ ಮನಸ್ಸೇ! ಅಜ್ಞಾನವನ್ನು ನೀನು ಬಿಡು. ತಿರುವಾಟ್ಟಾಱು ದಿವ್ಯಕ್ಷೇತ್ರದ ಸ್ವಾಮಿಯ ಪಾದಗಳನ್ನು ನಮಸ್ಕರಿಸು.

(೨) ವಾಟ್ಟಾಱ್ಱಾನಡಿವಣಙ್ಗಿ ಮಾಞಾಲಪ್ಪಿಱಪ್ಪಱುಪ್ಪಾನ್,
ಕೇಟ್ಟಾಯೇ ಮಡನೆಞ್ಜೇ ಕೇಶವನೆಮ್ಮಿರುವಾನ್,
ಪಾಟ್ಟಾಯಪಲಪಾಡಿ ಪ್ಪೞವಿನೈಕಳ್ ಪಱ್ಱಱುತ್ತು,
ನಾಟ್ಟಾರೋಡಿಯಲ್‌ವೊೞಿನ್ದು ನಾರಣನೈ ನಣ್ಣಿನಮೇ.

ಪ್ರ॥ ಮಾಞ್ಞಾಲ-ಮಹಾ ಪ್ರಪಞ್ಚದಲ್ಲಿರುವ, ಪಿಱಪ್ಪು-ಜನ್ಮಪರಮ್ಪರೆಯನ್ನು, ಅಱುಪ್ಪಾನ್-ಛೇದಿಸುವುದಕ್ಕಾಗಿ, ವಾಟ್ಟಾಱ್ಱಾನ್-ತಿರುವಾಟ್ಟಾಱುಸ್ವಾಮಿಯ, ಅಡಿವಣಙ್ಗಿ-ಪಾದಗಳಲ್ಲಿ ನಮಸ್ಕರಿಸಿ, ಕೇಶವನ್ ಎಮ್ ಪೆರುಮಾನೈ-ಕೇಶಿಯೆಂಬ ಅಸುರನನ್ನು ಕೊಂದ ಆ ನಮ್ಮ ಸ್ವಾಮಿಯನ್ನು ಕುರಿತು, ಪಲಪಾಟ್ಟು ಅಯ-ಅನೇಕ ಗೀತಗಳನ್ನು, ಪಾಡಿ-ಹಾಡಿ, ಪೞವಿನೈಕಳ್-ಅನಾದಿ ಕರ್ಮಗಳನ್ನು, ಪಱ್ಱು ಅಱುತ್ತು-ಸಮೂಲವಾಗಿ ನಾಶಪಡಿಸಿ, ನಾಟ್ಟಾರೋಡು-ಸಂಸಾರಿಗಳಾದ ಲೌಕಿಕರೊಡನೆ, ಇಯಲ್ವು-ಸ್ನೇಹವನ್ನು, ಒೞಿನ್ದು-ಬಿಟ್ಟು, ನಾರಣನೈ-ಶ್ರೀಮನ್ನಾರಾಯಣನನ್ನು, ನಣ್ಣಿನಮ್-ನಾವು ಆಶ್ರಯಿಸಿದೆವು. ಮಡನೆಞ್ಜೇ-ಚಪಲವಾದ ಮನಸ್ಸೇ!, ಕೇಟ್ಟಾಯೇ-(ನೀನು) ಈ ಉಪಕಾರ ಕ್ರಮವನ್ನು ಕೇಳಿದೆಯಷ್ಟೆ!

(ಸ-ಗಾ-ರ ॥)—

ಶ್ರೀವಾಟ್ಟಾಱ್-ಪುರನಾಯಕಸ್ಯ ಚರಣೌ ನತ್ವಾ ಭವಧ್ವಂಸಕಾ-
ನಾಥಂ ಕೇಶವಮಚ್ಯುತಂ ವಯಮುಮೀ ಸಙ್ಕೀರ್ತ್ಯ ಗೀತೈಶ್ಚ ತಮ್ ।
ಧ್ವಸ್ತಪ್ರಾಕ್ತನಕರ್ಮಪಾಶನಿವಹಾಸ್ತ್ಯಕ್ತ್ವಾ ಚ ಸಂಸಾರಿಭಿ-
ಸ್ಸಙ್ಗಂ ಶ್ರೀಹರಿಮಾಶ್ರಿತಾಶ್ಶೃಣು ಮನೋ! ನಾರಾಯಣಂ ಶ್ರೀಧರಮ್ ॥

ತಾ॥ ಮಹಾ ಪ್ರಪಂಚದಲ್ಲಿರುವ ಜನ್ಮಪರಂಪರೆಯನ್ನು ಛೇದಿಸುವುದಕ್ಕಾಗಿ ತಿರುವಾಟ್ಟಾಱು ಸ್ವಾಮಿಯ ಪಾದಗಳಲ್ಲಿ ನಮಸ್ಕರಿಸಿ, ಕೇಶವನೆಂಬ ನಮ್ಮ ಸ್ವಾಮಿಯನ್ನು ಕುರಿತು ಅನೇಕ ಗೀತಗಳನ್ನು ಹಾಡಿ, ಅನಾದಿ ಕರ್ಮಗಳನ್ನು ಸಮೂಲವಾಗಿ ನಾಶಪಡಿಸಿ, ಸಂಸಾರಿಗಳಾದ ಲೌಕಿಕರೊಡನೆ ಸಹವಾಸವನ್ನು ಬಿಟ್ಟು ಶ್ರೀಮನ್ನಾರಾಯಣನನ್ನು ನಾವು ಆಶ್ರಯಿಸಿದೆವು. ಎಲೈ ಚಪಲವಾದ ಮನಸ್ಸೇ! ಈ ಉಪಕಾರ ಕ್ರಮವನ್ನು ನೀನು ಕೇಳಿದೆಯಷ್ಟೆ!

(೩) ನಣ್ಣಿ ನಮ್ ನಾರಾಯಣನೈ, ನಾಮಙ್ಗಳ್ ಪಲಶೊಲ್ಲಿ,
ಮಣ್ಣುಲಕಿಲ್ ವಳಮ್ ಮಿಕ್ಕ ವಾಟ್ಟಾಱ್ಱಾನ್ ವನ್ದಿನ್ಱು,
ವಿಣ್ಣುಲಕಮ್ ತರುವಾನಾಯ್ ವಿರೈಕಿನ್ಱಾನ್ ವಿದಿವಕೈಯೇ,
ಎಣ್ಣಿನವಾಱಾಕಾ ವಿಕ್ಕರುಮಙ್ಗಳೆನ್ನೆಞ್ಜೇ.

ಪ್ರ॥ ಎನ್ ನೆಞ್ಜೇ-ನನ್ನ ಮನಸ್ಸೇ, ಪಲನಾಮಙ್ಗಳ್-(ಭಗವನ್ನಾಮ) ಅನೇಕ ನಾಮಗಳನ್ನು, ಶೊಲ್ಲಿ-ಹೇಳಿ, ನಾರಾಯಣನೈ-ಶ್ರೀಮನ್ನಾರಾಯಣನನ್ನೇ, ನಣ್ಣಿ ನಮ್-ಆಶ್ರಯಿಸಿದೆವು. ಮಣ್ಣುಲಕಲ್-ಭೂಲೋಕದಲ್ಲಿ, ವಳಮ್ ಮಿಕ್ಕ-ಗುಣ

ಸಮ್ಪತ್ತಿನಿಂದ ಪರಿಪೂರ್ಣನಾದ, ವಾಟ್ಪಾರ್ರ್ರಾ – ತಿರುವಾಟ್ಟಾಱುಸ್ವಾಮಿಯು, ವನ್ದು–ತಾನೇ ಬಂದು, ಇನ್ರು–ಈಗ, ವಿಣ್ಣುಲಕಮ್–ಪರಮಪದವನ್ನು, ವಿದಿ ವಕೈಯೇ–ನಮ್ಮ ಅನುಮತಿಯ ಪ್ರಕಾರ, ತರುವಾನಾಯ್–ತರುವವನಾಗಿ, ವಿರ್ೈ ಕಿನ್ರಾ–ಉದ್ದೇಶಿಸಿ ಇರುತ್ತಾನೆ. ಇಕ್ಕರುಮಙ್ಗಳ್ – ಈ ಕಾರ್ಯಗಳು, ಎಣ್ಣಿನ ಅಪ್ರಾ–ನಾವು ಸಂಕಲ್ಪಿಸಿದಹಾಗೆಯೇ, ಆಕಾ–ಸಫಲವಾಗಬೇಕು.

( ಸ–ಗಾ–ರ ॥ )—

**ಭೋ! ಭೋ! ಮಾನಸ! ಸಂಶ್ರಿತಾಃ ಕಿಲ ವಯಂ ನಾರಾಯಣಂ ಶ್ರೀಧರಂ**
**ತನ್ನಾಮಾವಳಿಕೀರ್ತನೈಸ್ಸ ತು ಹರಿರ್ವಾಟಾರ್-ನಿವಾಸೀ ಸ್ವಯಮ್ ।**
ಆಗತ್ಯಾತ್ರ ಪರಂ ಪದಂ ಪ್ರಿಯತಮಂ ನಃ ಪ್ರಾಪ್ಯಮೇವಾವ್ಯಯಂ
ದಾತುಂ ಚಾಸ್ತಿ ಹಿ ಸಾಭಿಲಾಷ ಇದಮೇವಾಸ್ತು ಪ್ರಿಯಂ ನಃ ಫಲಮ್ ॥

ತಾ॥ ಎಲೈ ಮನಸ್ಸೇ! ಭಗವನ್ತನ ಅನೇಕನಾಮಗಳನ್ನು ಹೇಳಿ ಶ್ರೀಮನ್ನಾರಾಯಣನನ್ನೇ ನಾವು ಆಶ್ರಯಿಸಿದೆವು. ಈ ಭೂಲೋಕದಲ್ಲಿ ಗುಣಸಮೃದ್ಧಿಯುಳ್ಳ ತಿರುವಾಟ್ಟಾಱುಸ್ವಾಮಿಯು ತಾನೇ ಬಂದು ಈಗ ಪರಮಪದವನ್ನು ನಮ್ಮ ಇಷ್ಟಾನುಸಾರ ಅನುಗ್ರಹಿಸಲು ಉದ್ದೇಶಿಸಿ ಇರುತ್ತಾನೆ. ಈ ಕಾರ್ಯಗಳು ನಾವು ಸಙ್ಕಲ್ಪಿಸಿದಹಾಗೆಯೇ ಸಫಲವಾಗಬೇಕು.

(೪) ಎನ್ನೆಞ್ಜತ್ತುಳ್ಳಿರುನ್ದಿಙ್ಗಿರುನ್ತಮಿಳ್ ನೂಲಿವೈ ಮೊಳಿನ್ದು,
ವನ್ನೆಞ್ಜತ್ತಿರಣಿಯನೈ ಮಾರ್ವಿಡನ್ದ ವಾಟ್ಟಾಱಾನ್,
ಮನ್ನಙ್ಜ ಪ್ಪಾರದತ್ತು ಪಾಣ್ಡವರ್ಕ್ಕಾಯ್
ಪ್ಪಡೈತೊಟ್ಟಾನ್,
ನನ್ನೆಞ್ಜೇ ನಮ್ಪೆರುಮಾನ್ ನಮಕ್ಕರುಳ್ತಾನ್
ಶೆಯ್ವಾನೇ.

ಪ್ರ॥ ನಲ್‌ನೆಞ್ಜೇ–ಒಳ್ಳೇ ಮನಸ್ಸೇ! ವಲ್‌ನೆಞ್ಜತ್ತು–ಪ್ರಬಲವಾದ ದುಷ್ಟ ಮನಸ್ಸುಳ್ಳ, ಇರಣಿಯನೈ–ಹಿರಣ್ಯಕಶಿಪುವನ್ನು, ಮಾರ್ವು ಇಡನ್ದ–ಅವನ ವಕ್ಷಸ್ಸ್ಥಲವನ್ನು ಸೀಳಿ ನಾಶಪಡಿಸಿದ, ವಾಟ್ಟಾಱಾನ್ – ತಿರುವಾಟ್ಟಾಱುಸ್ವಾಮಿಯಾದವನು, ಮನ್ ಅಞ್ಜ–ಈ ಲೋಕದ ಅರಸರೆಲ್ಲರೂ ನಡುಗುವಂತೆ, ಪಾರದತ್ತು–ಭಾರತಯುದ್ಧದಲ್ಲಿ, ಪಾಣ್ಡವರ್ಕ್ಕಾಯ್ – ಪಾಣ್ಡವರಿಗಾಗಿ, ಪಡೈತೊಟ್ಟಾನ್ –

ಶಸ್ತ್ರಧಾರಿಯಾಗಿ ನಿಂತ, ನಮ್ ಪೆರುಮಾಳ್–ನಮ್ಮ ಸ್ವಾಮಿಯು, ಎನ್ ನೆಞ್ಜತ್ತುಳ್ ಇರುನ್ದು–ನನ್ನ ಮನಸ್ಸಿನಲ್ಲಿ ಸ್ಥಿರವಾಗಿ ನಿಂತು, ಇಙ್ಗು–ಈ ದಶೆಯಲ್ಲಿ, ಇರುಮ್ ತಮಿೞ್‌ನೂಲ್–ಮಹಾದ್ರಾವಿಡಪ್ರಬನ್ಧವಾದ, ಇವೈಮೊೞಿನ್ದು–ಈ ಗ್ರನ್ಥಗಳನ್ನು ತಾನೇ ರಚಿಸಿ, ನಮಕ್ಕು – ನಮಗೆ, ಅರುಳ್ – ಕೃಪೆಯನ್ನು (ಉಪಕಾರವನ್ನು), ತಾನ್‌ಶೆಯ್‌ವಾನೇ–ತಾನೇ ಮಾಡುವವನಾಗಿದಾನೆ.

( ಸ–ಗಾ–ರ ॥ )

ಹೇ! ಸಚ್ಚಿತ್ತ! ಖಿಲಂ ಹಿರಣ್ಯಕಶಿಪುಂ ಭಿತ್ವಾ ಚ ವಕ್ಷಸ್ಸ್ಥಲೇ
ಶ್ರೀವಾಟ್ಟಾರ್‌ಪ್ರಭುರೇಷ ಭಾತಿ ಸಮರೇ ತಾನ್ ಪಾಣ್ಡವಾನ್ ಭಾರತೇ ।
ಧೃತ್ವಾ ರಕ್ಷಿತುಮಾಯುಧಂ ಚ ಪರಮಸ್ವಾಮ್ಯತ್ರ ಸ್ಥಿತೋ ಮೇ ಹೃದಿ
ಪ್ರಾಕಾಶ್ಯಂ ದ್ರವಿಡಾಗಮಸ್ಯ ರಚಯನ್ ದಿವ್ಯಂ ಕೃಪಾವಾನ್ ಮಯಿ ॥

ತಾ॥ ಒಳ್ಳೇಮನಸ್ಸೇ! ಅತಿದುಷ್ಟಚಿತ್ತನಾದ ಹಿರಣ್ಯಕಶಿಪುವಿನ ವಕ್ಷಸ್ಸ್ಥಲವನ್ನು ಸೀಳಿದ ತಿರುವಾಟ್ಟಾಱ್ಱುಸ್ವಾಮಿಯು ಈ ಲೋಕದ ಅರಸರೆಲ್ಲರೂ ನಡುಗುವಂತೆ, ಭಾರತಯುದ್ಧದಲ್ಲಿ ಪಾಣ್ಡವರಿಗಾಗಿ ಶಸ್ತ್ರಧಾರಿಯಾಗಿ ನಿಂತು ಇದ್ದು, ನನ್ನ ಮನಸ್ಸಿನಲ್ಲಿ ಈಗ ಸ್ಥಿರವಾಗಿ ನಿಂತು, ಈ ಮಹಾ ದ್ರಾವಿಡಪ್ರಬನ್ಧರೂಪವಾದ ಗ್ರನ್ಥಗಳನ್ನು ತಾನೇ ರಚಿಸಿ, ನಮಗೆ ಮಹೋಪಕಾರವನ್ನು ತಾನೇ ಮಾಡುವವನಾಗಿದಾನೆ.

(೫೯) ವಾನೇಱ ವೞಿತನ್ದ ವಾಟ್ಟಾಱ್ಱಾನ್ ಪಣಿವಕೈಯೇ,
ನಾನೇಱ ಪ್ಪೆಱುಕಿನ್ಱೇನ್ ನರಕತ್ತೈ ನಕು ನೆಞ್ಜೇ,
ತೇನೇಱು ಮಲರ್‌ತ್ತುಳವಮ್ ತಿಕೞ್‌ಪಾದನ್ ಶೆೞುಮ್
ಪಱವೈ,
ತಾನೇಱಿ ತ್ತಿರಿವಾನ ತಾಳಿಣೈಯೆನ್ ತಲೈಮೇಲೇ.

ಪ್ರ॥ ವಾನ್ ಏಱ–ಪರಮಪದವನ್ನು ಹತ್ತಲು, ವೞಿತನ್ದ–ಅರ್ಚಿರಾದಿ ಮಾರ್ಗವನ್ನು ಉಂಟುಮಾಡಿದ, ವಾಟ್ಟಾಱ್ಱಾನ್–ತಿರುವಾಟ್ಟಾಱುಸ್ವಾಮಿಯಾದ ಸರ್ವೇಶ್ವರನೇ, ಪಣಿವಕೈಯೇ–ಪೂರ್ವದಲ್ಲೇ ನಿಯಮಿಸಿದಪ್ರಕಾರದಲ್ಲೇ, ಶೆೞುಮ್ ಪಱವೈ–ಸುನ್ದರನಾದ ಗರುಡನನ್ನು, ತಾನ್ ಏಱಿತ್ತಿರಿವಾನ್–ತಾನು ಹತ್ತಿ ಸಂಚರಿಸುತ್ತಿದ್ದಾನೆ. ಅವನ, ಅ ತಾಳಿಣೈ – ಆ ಪಾದಯುಗ್ಮವನ್ನು, ನಾನ್ ಏಱ – ನಾನು ಮೇಲಕ್ಕೆ ಹತ್ತಲು, ಪೆಱುಕಿನ್ಱೇನ್–ಹೊಂದುತ್ತೇನೆ. ತೇನ್ ಏಱು–ಮಧುಭರಿತವಾದ,

ಮಲರ್‌ತುಳವಮ್‌–ಪುಷ್ಪಗಳುಳ್ಳ ತುಳಸಿಯು, ತಿಕಳ್–ಪ್ರಕಾಶಿಸುವ, ಪಾದ–ಪಾದಗಳುಳ್ಳವನು, ಎನ್ ತಲೈಮೇಲೇ – ನನ್ನ ತಲೆಯಮೇಲೆ ಇರುತ್ತಾನೆ. (ಆದುದರಿಂದ) ನೆಞ್ಜೇ – ಮನಸ್ಸೇ, ನರಕತ್ತೈ – ಸಂಸಾರವೆಂಬ ನರಕವನ್ನು, ನಕು–ಪರಿಹಾಸಮಾಡಿ ಧ್ವಂಸಮಾಡು.

( ಸ–ಗಾ–ರ || )—

**ದಿವ್ಯಂ ಧಾಮ ಪರಂ ಪ್ರಯಾತುಮಪಿ ನಸ್ಸನ್ಮಾರ್ಗದಾಯೀ ಹರಿ-**
**ಶ್ರೀವಾಟ್ಟಾರ್–ಪ್ರಭುರೇಷ ಪೂರ್ವಮವದದ್ಯಾಂ ರೀತಿಮೇವ ಸ್ವಯಮ್ !**
**ತಾಂ ಪ್ರಾಪ್ಯಾದ್ಯ ತು ತಾರ್ಕ್ಷ್ಯವಾಹಚರಣೌ ತಾವೇವ ನೌಮಿ ಪ್ರಿಯಾ |**
**ಭಾತಿ ಶ್ರೀತುಳಸೀಧರೋ ಮಮ ಶಿರಸ್ಯೇವಂ ಹತಾ ದುರ್ಗತಿಃ ||**

ತಾ|| ನಾವು ಪರಮಪದವನ್ನು ಹತ್ತಲು ಅರ್ಚಿರಾದಿ ಮಾರ್ಗವನ್ನು ಏರ್ಪಡಿಸಿದ ತಿರುವಾಟ್ಟಾಱು ಕ್ಷೇತ್ರದ ಸ್ವಾಮಿಯು ಗರುಡಾರೂಢನಾಗಿ ಸಂಚರಿಸುತ್ತಿದ್ದಾನೆ. ಅವನ ಪಾದಯುಗ್ಮವನ್ನೇ ಹೊಂದಿ ನಾನು ಮೇಲಕ್ಕೆ ಹತ್ತಲು ಯತ್ನಿಸುತ್ತೇನೆ. ಮಧುಭರಿತ ಕುಸುಮಾವೃತವಾದ ತುಳಸಿಯೊಡನೆ ಪ್ರಕಾಶಿಸುವ ಪಾದಗಳುಳ್ಳ ಆ ಸ್ವಾಮಿಯು ನನ್ನ ತಲೆಯಮೇಲೆ ನಿಂತಿದಾನೆ. ಆದುದರಿಂದ ಎಲೈ ಮನಸ್ಸೇ! ನೀನು ನರಕವನ್ನು (ಪರಿಹಾಸಮಾಡಿ) ಭೇದಿಸು.

(೭) ತಲೈಮೇಲ ತಾಳಿಣೈಕಳ್ ತಾಮರೈಕ್ಕಣೆನ್ನಮ್ಮಾನ್,
ನಿಲೈಪೇರಾನೆನ್ನೆಞ್ಜತ್ತೆಪ್ಪೊೞುದುಮೆಮ್ಪೆರುಮಾನ್,
ಮಲೈಮಾಡತ್ತರವಣೈಮೇಲ್ ವಾಟ್ಟಾಱಾನ್ ಮದಮಿಕ್ಕ,
ಕೊಲೈಯಾನೈ ಮರುಪ್ಪೊಶಿತ್ತಾನ್ ಕುರೈಕೞಲ್‌ಕಳ್
ಕುಱುಕಿನಮೇ.

ಪ್ರ|| ತಾಳ್ ಇಣೈಕಳ್–ಅವನ ಪಾದಗಳೆರಡೂ, ತಲೈಮೇಲ–ನನ್ನ ತಲೆಯ ಮೇಲೆ ಇವೆ. ತಾಮರೈಕ್ಕಣ್ – ಪುಣ್ಡರೀಕಾಕ್ಷನಾದ, ಎನ್ ಅಮ್ಮಾನ್ – ನನ್ನ ಸ್ವಾಮಿಯು, ಎನ್ ನೆಞ್ಜತ್ತು–ನನ್ನ ಮನಸ್ಸಿನಲ್ಲಿ, ಎಪ್ಪೊೞುದುಮ್ – ಯಾವಾಗಲೂ, ನಿಲೈ ಪೇರಾನ್–ಸ್ಥಿರವಾಗಿ ನಿಂತವನಾಗಿ, ಎಮ್ ಪೆರುಮಾನ್–ನನ್ನ ನಾಥನಾಗಿ, ಮಲೈಮಾಡತ್ತು–ಬೆಟ್ಟದಂತೆ ಉನ್ನತವಾದ ಉಪ್ಪರಿಗೆಗಳುಳ್ಳ, ವಾಟ್ಟಾಱು ಅರವಣೈಮೇಲಾನ್ – ತಿರುವಾಟ್ಟಾಱು ದಿವ್ಯದೇಶದಲ್ಲಿ ಶೇಷಶಾಯಿಯಾಗಿ, ಮದ ಮಿಕ್ಕ–ಮದದಿಂದ ತುಂಬಿರುವ ಕೊಬ್ಬಿದ, ಕೊಲೈ–ಕ್ರೂರಕೃತ್ಯವುಳ್ಳ, ಯಾನೈ-

(ಕಂಸನ) ಆನೆಯ, ಮರುಪ್ಪು- ಕೊಂಬನ್ನು, ಒಶಿತ್ತಾನ್ - ಮುರಿದವನ, ಕುರೈ-ಧ್ವನಿಯುಕ್ತವಾದ, ಕೞಲ್‌ಕಳ್-(ವೀರಗೊಲುಸುಳ್ಳ) ಪಾದಗಳನ್ನು, ಕುಱುಕಿನಮೇ-ಆಶ್ರಯಿಸಿದೆವು

( ಸ-ಗಾ-ರ ॥ )—

ತತ್ಪಾದಾಮ್ಬುಜಯುಗ್ಮಮಸ್ತಿ ಸತತಂ ಮನ್ಮಸ್ತಕೇ ! ಭಾತಿ ಮೇ
ನಾಥಃ ಪದ್ಮವಿಲೋಚನೋ ಮಮ ಹೃದಿ ಸ್ಥೈರ್ಯಂ ಗತಸ್ಸರ್ವದಾ ।
ಶ್ರೀವಾಟ್ಟಾರ್‌-ನಗರೇಽಸ್ತಿ ಶೇಷಶಯನೋ! ಮತ್ತದ್ವಿಪಧ್ವಂಸಿನ-
ಸ್ತಸ್ಯಾಂಘ್ರಿದ್ವಯಮೇವ ಸನ್ತತಮಮೀ ಸಂಶ್ರಿತ್ಯ ಧನ್ಯಾ ವಯಮ್ ॥

ತಾ॥ ಅವನ ಪಾದಗಳೆರಡೂ ನನ್ನ ತಲೆಯಮೇಲೆ ಇವೆ. ಪುಣ್ಡರೀಕಾಕ್ಷನಾದ ನನ್ನ ಸ್ವಾಮಿಯು ನನ್ನ ಮನಸ್ಸಿನಲ್ಲಿ ಯಾವಾಗಲೂ ಸ್ಥಿರವಾಗಿ ನಿಂತು ನನ್ನ ನಾಥನಾಗಿ, ಉನ್ನತ ಸೌಧಪರಿವೃತವಾದ ತಿರುವಾಟ್ಟಾಱು ದಿವ್ಯದೇಶದಲ್ಲಿ ಶೇಷಶಾಯಿಯಾಗಿ, ಮತ್ತಗಜವಾದ (ಕಂಸನ) ಆನೆಯನ್ನು ಕೊಂಬುಮುರಿದು ಧ್ವಂಸಮಾಡಿದುದರಿಂದ, ಅವನ ವೀರಗೊಲುಸುಳ್ಳ ಪಾದಗಳನ್ನೇ ನಾವು ಆಶ್ರಯಿಸಿದೆವು.

(೭) ಕುರೈಕೞಲ್‌ಕಳ್ ಕುಱುಕಿನಮ್ ನಮ್ ಗೋವಿನ್ದನ್
ಕುಡಿಕೊಣ್ಡಾನ್,
ತಿರೈಕುಱುವು ಕಡಲ್‌ಪುಡೈಶೂೞ್ ತೆನ್ನಾಟ್ಟು ತ್ತಿಲದಮನ್ನ,
ವರೈಕುಱುವು ಮಣಿಮಾಡ ವಾಟ್ಟಾಱ್ಱಾನ್
ಮಲರಡಿಮೇಲ್,
ವಿರೈಕುಱುವು ನಱುನ್ತುೞವಮ್ ಮೆಯ್‌ನಿನ್ಱು ಕಮೞುಮೇ.

ಪ್ರ॥ ಕುರೈ-ಶಬ್ದಮಾಡುವ, ಕೞಲ್‌ಕಳ್ - (ವೀರಗೊಲುಸುಳ್ಳ) ಪಾದಗಳನ್ನು, ಕುಱುಕಿನಮ್-ಆಶ್ರಯಿಸಿದೆವು. ನಮ್ ಗೋವಿನ್ದನ್-ನಮಗೆ ಭವ್ಯನಾದ ಗೋವಿನ್ದನು, ಕುಡಿಕೊಣ್ಡಾನ್-ನಮ್ಮ ಮನಸ್ಸನ್ನು ವಾಸಸ್ಥಾನವಾಗಿ ಮಾಡಿಕೊಂಡನು. ತಿರೈಕುಱುವು-ಅಲೆಗಳು ತುಂಬಿ ಇರುವ, ಕಡಲ್-ಸಮುದ್ರದಿಂದ, ಪುಡೈಶೂೞ್-ಪಾರ್ಶ್ವಗಳಲ್ಲಿ ಪರಿವೃತವಾದ, ತೆನ್ನಾಟ್ಟು-ದಕ್ಷಿಣದೇಶಕ್ಕೆ, ತಿಲದಮನ್ನ-ತಿಲಕದಂತೆ ಇರುವ, ವರೈಕುಱುವು - ಪರ್ವತಗಳಂತೆ ತುಂಬಿ ಇರುವ, ಮಣಿಮಾಡ-ರತ್ನಮಯ ಸೌಧಗಳುಳ್ಳ, ವಾಟ್ಟಾಱ್ಱಾನ್-ತಿರುವಾಟ್ಟಾಱು ದಿವ್ಯಕ್ಷೇತ್ರದಲ್ಲಿ ವಾಸಮಾಡುವ ಸ್ವಾಮಿಯ, ಮಲರ್ ಅಡಿಮೇಲ್-ತಾವರೆಹೂವಿನಂತೆ

ಇರುವ ಪಾದಗಳಮೇಲೆ, ವಿರೈಕಮೞುವು – ಪರಿಮಳಭರಿತವಾದ, ನಱುಮ್ ತುಳವಮ್–ಸುಗನ್ಧಿಯಾದ ತುಳಸಿಯು, ಮೆಯ್ ನಿನ್ಱು–ನನ್ನ ಶರೀರದಲ್ಲಿ ಸ್ಥಿರವಾಗಿ ನಿಂತು, ಕಮೞುಮ್–ಪರಿಮಳಿಸುತ್ತಿದೆ.

( ಸ–ಗಾ–ರ ॥ )—

ದಿವ್ಯಂ ಭೂಷಣಭೂಷಿತಂ ಪದಯುಗಂ ಸಂಶ್ರಿತ್ಯ ಧನ್ಯಾ ವಯಂ !
ಗೋವಿನ್ದೋ ಹೃದಿ ಸನ್ತತಂ ವಸತಿಮೇ ಪಾಥೋಧಿಪರ್ಯಾವೃತೇ ।
ದೇಶೇ ದಕ್ಷಿಣದಿಗ್ಭವೇಽಸ್ತಿ ತಿಲಕಪ್ರಾಯೇಽತ್ರ ವಾಟ್ಟಾಱ್–ಪುರೇ
ದಿವ್ಯೇ ರತ್ನಮಯೇಽಸ್ಯ ಪಾದತುಳಸೀ ಮೇಽಙ್ಗೇ ಸುಗನ್ಧಾವಹಾ ॥

ತಾ॥ ಭಗವನ್ತನ ವೀರಗೊಲುಸುಳ್ಳ ಪಾದಗಳನ್ನು ಆಶ್ರಯಿಸಿದೆವು. ನಮ್ಮ ಗೋವಿನ್ದನು ನಮ್ಮ ಮನಸ್ಸನ್ನು ವಾಸಸ್ಥಾನವಾಗಿ ಮಾಡಿಕೊಂಡನು. ಸಮುದ್ರಪರಿವೃತವಾಗಿ ದಕ್ಷಿಣದೇಶಕ್ಕೆ ತಿಲಕಪ್ರಾಯವಾಗಿ ಮಣಿಮಯ ಸೌಧಗಳುಳ್ಳ ತಿರುವಾಟ್ಟಾಱು ದಿವ್ಯಕ್ಷೇತ್ರದಲ್ಲಿ ವಾಸಮಾಡುವ ಸ್ವಾಮಿಯ ಪಾದಾಮ್ಬುಜಗಳಮೇಲೆ ಇದ್ದ ಸುಗನ್ಧಿಯಾದ ತುಳಸಿಯು ನನ್ನ ಶರೀರದಲ್ಲಿ ನಿಂತು ಪರಿಮಳಿಸುತ್ತಿದೆ.

(೮) ಮೆಯ್ಯಾನಿನ್ಱು ಕಮೞ್ ತುಳವ ವಿರೈಯೋಡು ತಿರುಮುಡಿಯರ್,
ಕೈನಿನ್ಱ ಶಕ್ಕರತ್ತನ್ ಕರುದುಮಿಡಮ್ ಪೊರುದುಪುನಲ್,
ಮೈನಿನ್ಱ ವರೈಪೋಲುಮ್ ತಿರುವುರುವ ವಾಟ್ಟಾಱ್ಱಾಱ್ಕು,
ಎನ್ನನ್ಱಿ ಶೆಯ್ದೇನಾವೆನ್ನೆಞ್ಜಿಲ್ ತಿಕೞ್ವದುವೇ.

ಪ್ರ॥ ಮೆಯ್ ನಿನ್ಱು–ಶರೀರದಲ್ಲೆಲ್ಲಾ ನಿಂತು, ಕಮೞುತುಳವ–ಪರಿಮಳಿಸುವ ತುಳಸಿಯ, ವಿರೈ ಏಱು – ಸುಗನ್ಧದಿಂದ ಭರಿತವಾದ, ತಿರುಮುಡಿಯರ್–ಶಿರಸ್ಸುಳ್ಳ, ಕರುದುಮಿಡಮ್–ಮನಸ್ಸುಬಂದ ಸ್ಥಲಗಳಿಗೆ ಹೋಗಿ, ಪೊರುದು–ಯುದ್ಧಮಾಡಿ, ಕೈನಿನ್ಱಶಕ್ಕರತ್ತನ್–ಪುನಃ ಹಸ್ತದಲ್ಲಿ ಬಂದುನಿಂತಿರುವ ಚಕ್ರವುಳ್ಳ ಸ್ವಾಮಿಯಾದ, ಪುನಲ್ ನಿನ್ಱ – ಸಮುದ್ರದಂತೆ ಸ್ಥಿರವಾಗಿ ನಿಂತಿರುವ, ಮೈವರೈಪೋಲುಮ್–ನೀಲವಾದ ಪರ್ವತದಂತೆ ಇರುವ, ತಿರು ಉರುವ–ಸುನ್ದರವಾದ ದಿವ್ಯಮಂಗಳವಿಗ್ರಹವುಳ್ಳ, ವಾಟ್ಟಾಱ್ಱಾಱ್ಕು–ತಿರುವಾಟ್ಟಾಱುಸ್ವಾಮಿಗೆ, ಎನ್ ನನ್ಱಿ–ಯಾವ ಉಪಕಾರವನ್ನು, ಶೆಯ್ದೇನಾ–ನಾನು ಮಾಡಿದೆನೆಂದು, ಎನ್ನೆಞ್ಜಿಲ್–ನನ್ನ ಮನಸ್ಸಿನಲ್ಲಿ, ತಿಕೞ್ವದುವೇ–(ಅವನು) ಪ್ರಕಾಶಿಸುತ್ತಿದಾನೆ ?

( ಸ-ಗಾ-ರ )—

ಸೌಗನ್ಧ್ಯಾನ್ವಿತಮೂರ್ತಿರೇಷ ತುಲಸೀಭಾಸ್ವತ್ಕಿರೀಟೋ ಹರಿ–
ರ್ವೀರಶ್ರೀಯುತಚಕ್ರಪಾಣಿರತುಲೋ ನೀಲಾಞ್ಜನಾದ್ರಿಪ್ರಭಃ ।
ಶ್ರೀವಾಟ್ಟಾರ್–ಪುರವಾಸಿನೋಽಸ್ಯ ಕಿಮಹಂ ಸತ್ಕಾರಕೃತ್ಯಂ ಶುಭಂ
ಕೃತ್ವಾಽಸ್ಮ್ಯದ್ಯ ಕೃತೀ? ಸದಾಽಪಿ ಹೃದಿ ಮೇ ಯಸ್ಮಾತ್ಸ ಬಾಭಾತ್ಯಸೌ॥

ತಾ॥ ಶರೀರದಲ್ಲಿ ನಿಂತು ಪರಿಮಳಿಸುವ ತುಳಸೀಮಾಲೆಯುಳ್ಳ ಚಕ್ರಪಾಣಿಯಾದ ಸ್ವಾಮಿಯು ನೀಲಮಣಿ ಪರ್ವತದಂತೆ ದಿವ್ಯಮಂಗಳವಿಗ್ರಹವುಳ್ಳವನಾಗಿ ತಿರುವಾಟ್ಟಾಱುಕ್ಷೇತ್ರದಲ್ಲಿ ವಾಸವಾಗಿರುತ್ತಾನಾಗಿ ಅವನಿಗೆ ನಾನು ಏನು ಉಪಕಾರಮಾಡಿದೆನೆಂದು ತಿಳಿದು ನನ್ನ ಮನಸ್ಸಿನಲ್ಲಿ ಅವನು ಪ್ರಕಾಶಿಸುತ್ತಿದಾನೆ ?

(೯) ತಿಕೞ್ಕಿನ್ಱ ತಿರುಮಾರ್ಪಿಲ್ ತಿರುಮಙ್ಗೈ ತನ್ನೊಡುಮ್,
ತಿಕೞ್ಕಿನ್ಱ ತಿರುಮಾಲಾರ್ ಶೇರ್ವಿಡಮ್ ತಣ್ ವಾಟ್ಟಾಱು,
ಪುಕೞ್ನಿನ್ಱ ಪುಳ್ಳೂರ್ದಿ ಪೋರರಕ್ಕರ್ ಕುಲಮ್ ಕೆಡುತ್ತಾನ್,
ಇಕೞ್ವಿನ್ಱಿ ಯೆನ್ನೆಞ್ಜತ್ತೆಪ್ಪೊೞುದುಮ್ ಪಿರಿಯಾನೇ.

ಪ್ರ॥ ತಿಕೞ್ಕಿನ್ಱ–ಪ್ರಕಾಶಿಸುತ್ತಿರುವ, ತಿರುಮಾರ್ಪಿಲ್–ವಕ್ಷಸ್ಥಲದಲ್ಲಿ, ತಿರುಮಙ್ಗೈ ತನ್ನೊಡುಮ್–ಲಕ್ಷ್ಮೀದೇವಿಯೊಡನೆ, ತಿಕೞ್ಕಿನ್ಱ– ವಿರಾಜಮಾನನಾದ, ತಿರುಮಾಲಾರ್–ಶ್ರಿಯಃಪತಿಯು, ಶೇರ್ವಿಡಮ್–ನಿತ್ಯವಾಸಮಾಡುವ ಸ್ಥಲವು, ತಣ್–ಶೀತಳವಾದ, ವಾಟ್ಟಾಱು– ತಿರುವಾಟ್ಟಾಱು ಎಂಬ ದಿವ್ಯ ದೇಶವು. ಪುಕೞ್ನಿನ್ಱ–ಶೇಷತ್ವಪೂರ್ತಿಯೆಂಬ ಕೀರ್ತಿಯು ಸ್ಥಿರವಾಗಿ ಉಳ್ಳ, ಪುಳ್–ಗರುಡನನ್ನು, ಊರ್ದಿ – ವಾಹನವಾಗಿ ಮಾಡಿಕೊಂಡಿರುವ, ಪೋರ್ – ಯುದ್ಧೋನ್ಮುಖರಾದ, ಅರಕ್ಕರ್–ರಾಕ್ಷಸರ, ಕುಲಮ್–ಸಮೂಹವನ್ನು, ಕೆಡುತ್ತಾನ್ – ಧ್ವಂಸಮಾಡಿದ ಸ್ವಾಮಿಯು, ಎನ್ ನೆಞ್ಜತ್ತು–ನನ್ನ ಮನಸ್ಸಿನಲ್ಲೇ, ಇಕೞ್ವು ಇನ್ಱಿ–ಕ್ಲೇಶವಿಲ್ಲದೆ, ಎಪ್ಪೊೞುದುಮ್–ಯಾವಾಗಲೂ, ಪಿರಿಯಾನ್–ಬಿಡದೇ ವಾಸಮಾಡುತ್ತಿದಾನೆ.

( ಸ-ಗಾ-ರ ॥ )—

ಲಕ್ಷ್ಮ್ಯಾ ವಕ್ಷಸಿ ಭಾಸ್ವರೋಽಯಮಧುನಾ ವಾಟ್ಟಾರ್ಪುರೇ ಶ್ರೀಧರ–
ಸ್ತಾತ್ಪರ್ಯಾರೂಢ ಇಹಾಸ್ತಿ ಶೀತಲಗುಣೇ ನಿತ್ಯಂ ಸುಸೇವ್ಯೋ ನೃಣಾಮ್ ।
ಯುದ್ಧೇ ರಾಕ್ಷಸ ಸಙ್ಘನಾಶಕೃದಸೌ ಚಿತ್ತೇ ಮಮಾಸ್ತಿ ಸ್ವಯಂ
ನಿಶ್ಚಿನ್ತೋ ವಿಲಸತ್ಯಹೋ! ನ ಕಿಲ ಮಾಂ ತ್ಯಕ್ತ್ವಾ ಪ್ರಯಾತ್ಯನ್ಯತಃ ॥

ತಾ॥ ತನ್ನ ವಕ್ಷಸ್ಸ್ಥಲದಲ್ಲಿ ಲಕ್ಷ್ಮೀಸಮೇತನಾಗಿ ಪ್ರಕಾಶಿಸುವ ಶ್ರಿಯಃಪತಿಯು ನಿತ್ಯವಾಸವಮಾಡುವ ಸ್ಥಲವು ತಿರುವಾಟ್ಟಾಱು ಎಂಬ ದಿವ್ಯದೇಶವು. ಶೇಷತ್ವಭರಿತನಾಗಿ ಮಹಾಕೀರ್ತಿಯುಳ್ಳ ಗರುಡನನ್ನು ವಾಹನವಾಗಿ ಮಾಡಿಕೊಂಡು ಯುದ್ಧದಲ್ಲಿ ರಾಕ್ಷಸಧ್ವಂಸಕನಾದ ಸ್ವಾಮಿಯು ನನ್ನ ಮನಸ್ಸಿನಲ್ಲೇ ಯಾವಾಗಲೂ ಬಿಡದೆ ವಾಸವಮಾಡುತ್ತಿದಾನೆ.

(೧೦) ಪಿರಿಯಾಳ್ಚೆಯ್ಯೆನ್ಱು ಪಿಱಪ್ಪಱುತ್ತಾಳಱ ಕ್ಕೊಣ್ಡಾನ್,
ಅರಿಯಾಕಿಯಿರಣಿಯನೈ ಯಾಕಮ್ ಕೀಣ್ಡಾನನ್ಱು,
ಪೆರಿಯಾರ್ಕ್ಕಾಳ್ಪಟ್ಟಕ್ಕಾಲ್ ಪೆಱಾದ ಪಯನ್ ಪೆಱುಮಾಱು,
ವರಿವಾಳ್ವಾಯರವಣೈಮೇಲ್ ವಾಟ್ಟಾಱ್ಱಾನ್ ಕಾಟ್ಟಿನನೇ.

ಪ್ರ॥ ಪಿರಿಯಾದು-ಅವಿಚ್ಛಿನ್ನವಾಗಿ, ಆಳ್ಚೆಯ್ ಎನ್ಱು-ಸೇವೆಮಾಡು ಎಂದು ಹೇಳಿ, ಪಿಱಪ್ಪು-ಜನ್ಮಪರಮ್ಪರೆಯನ್ನು, ಅಱುತ್ತು-ಭೇದಿಸಿ, ಇರಣಿಯನೈ-ಹಿರಣ್ಯಕಶಿಪುವಿನ,ಆಕಮ್-ಶರೀರವನ್ನು, ಕೀಣ್ಡಾನ್-ಸೀಳಿದವನಾಗಿ, ವರಿ-ರೇಖೆಗಳನ್ನೂ, ವಾಳ್‌ವಾಯ್-ಕಾನ್ತಿಯನ್ನೂ ಉಳ್ಳ, ಅರವಣೈಮೇಲ್-ಶೇಷರೂಪಿಯಾದ ಶಯನದ ಮೇಲೆ, ಅಱ - ಅಧಿಕವಾಗಿ, ಆಳ್‌ಕೊಣ್ಡಾನ್ - ಸೇವೆಯನ್ನು ಸ್ವೀಕರಿಸಿದವನಾಗಿ, ಅನ್ಱು-ಆ ಹಿರಣ್ಯಾಸುರನಿಂದಪ್ರಹ್ಲಾದನು ಪೀಡಿಸಲ್ಪಟ್ಟಾಗ, ಅರಿ ಆಕಿ-ನರಸಿಂಹರೂಪಿಯಾಗಿ, ವಾಟ್ಟಾಱ್ಱಾನ್ - ತಿರುವಾಟ್ಟಾಱುಸ್ವಾಮಿಯು, ಪೆರಿಯಾರ್ಕ್ಕು - ಮಹನೀಯರಿಗೂ, ಆಳ್‌ಪಟ್ಟಕ್ಕಾಲ್ - ಸೇವೆಮಾಡಿದರೆ, ಪೆಱಾದಪಯನ್-ಹೊಂದಲು ಅಸಾಧ್ಯವಾದ ಪ್ರಯೋಜನಗಳನ್ನು, ಪೆಱುಮ್ ಆಱು-ಹೊಂದಲು ಮಾರ್ಗವನ್ನು, ಕಾಟ್ಟಿನನೇ-ತೋರಿಸಿದನಷ್ಟೆ!

( ಸ-ಗಾ-ರ ॥ )—

ಕೈಙ್ಕರ್ಯಂ ಸತತಂ ಭವೇದಿತಿ ಚ ಶತ್ರುಶ್ಯರ್ಥಿಜನ್ಮಾಪಹ-
ಶ್ಶ್ರೀಮಾನ್ ಭಾತಿ ಹಿರಣ್ಯಕಾಸುರ-ತನುಚ್ಛೇದೀ ಚ ಶೇಷೇಶಯಃ ।
ಸೇವಾಂ ಪ್ರಾಪ್ಯ ಪರಾಂ ತದಾ ನರಹರಿರ್ಭೂತ್ವಾ ಚ ಭಕ್ತಾವನೋ
ಯೋ ವಾಟ್ಟಾರ್-ನಗರೇಽಸ್ತ್ಯಸೌ ಹಿ ಮಹತಾಂ ಸೇವಾಫಲಂ ದರ್ಶಯನ್॥

ತಾ॥ ಅವಿಚ್ಛಿನ್ನವಾಗಿ ಸೇವೆಮಾಡಲು ನಮ್ಮ ಜನ್ಮಪರಂಪರೆಯನ್ನು ಭೇದಿಸಿ, ಹಿರಣ್ಯಕಶಿಪು ಧ್ವಂಸಕನಾಗಿ, ಶೇಷಶಾಯಿಯಾಗಿ, ನಮ್ಮ ಕೈಂಕರ್ಯವನ್ನು

ಸ್ವೀಕರಿಸುವ ನರಸಿಂಹಸ್ವಾಮಿಯಾಗಿ, ತಿರುವಾಟ್ಟಾಱು ಕ್ಷೇತ್ರದಲ್ಲಿ ವಾಸಮಾಡು ತ್ತಿರುವ ಭಗವಂತನು ಮಹನೀಯರಿಗೂ ಅಸಾಧ್ಯವಾದ ಮಾರ್ಗವನ್ನು ನಮಗೆ ಕೈಂಕರ್ಯಫಲವಾಗಿ ತೋರಿಸಿ ಅನುಗ್ರಹಿಸಿದನಷ್ಟೆ !

(೧೧) ಕಾಟ್ಟಿತ್ತನ್ ಕನ್ಕೞಲ್‌ಕಳ್ ಕಡುನರಕಮ್ ಪುಕಲೊೞಿತ್ತ,
ವಾಟ್ಟಾಱ್ ಎಮ್ಬೆರುಮಾನೈ ವಳಙ್ಕುರುಕೂರ್
ಚ್ಚಡಕೋಪನ್,
ಪಾಟ್ಟಾಯ ತಮಿೞ್‌ಮಾಲೈ ಯಾಯಿರತ್ತುಳಿಪ್ಪತ್ತುಮ್,
ಕೇಟ್ಟು, ಆರಾರ್ ವಾನವರ್‌ಕಳ್ ಶೆವಿಕ್ಕಿನಿಯ ಶೆಮ್‌ಶೊಲ್ಲೇ.

ಪ್ರ|| ತನ್‌ಕನ್ಕೞಲ್‌ಕಳ್–ತನ್ನ ವೀರಗೊಲುಸುಳ್ಳ ಧ್ವನಿಸುತ್ತಿರುವ ಪಾದ ಗಳನ್ನು, ಕಾಟ್ಟಿ–ತೋರಿಸಿ, ಕಡುನರಕಮ್ ಪುಕಲ್ -- ಕ್ರೂರವಾದ ನರಕದಲ್ಲಿ ಪ್ರವೇಶಿಸೋಣವನ್ನು, ಒೞಿತ್ತ–ಹೋಗಲಾಡಿಸಿದ, ವಾಟ್ಟಾಱ್–ತಿರುವಾಟ್ಟಾಱು ಕ್ಷೇತ್ರದ, ಎಮ್ಬೆರುಮಾನೈ–ನಮ್ಮ ಸ್ವಾಮಿಯನ್ನು ಕುರಿತು, ವಳಮ್–ರಮ್ಯವಾದ, ಕುರುಕೂರ್–ಕುರುಕಾಪುರಿಯ, ಶಡಕೋಪನ್–ಶಠಾರಿಮುನಿಯ, ಪಾಟ್ಟು ಆಯ– ಗೀತರೂಪವಾದ, ತಮಿೞ್‌ಮಾಲೈ–ದ್ರಾವಿಡಪದ್ಯಮಾಲಾರೂಪವಾದ, ಆಯಿರತ್ತುಳ್– ಸಹಸ್ರ ಪದ್ಯಾವಳಿಯಲ್ಲಿ, ಶೆವಿಕ್ಕು ಇನಿಯ–ಕಿವಿಗಳಿಗೆ ಇಂಪಾದ, ಶೆಮ್‌ಶೊಲ್– ದಿವ್ಯಸೂಕ್ತಿಮಯವಾದ, ಇಪ್ಪತ್ತುಮ್–ಈ ದಶಕವನ್ನು, ವಾನವರ್‌ಕಳ್–ನಿತ್ಯ ಸೂರಿಗಳು, ಕೇಟ್ಟು–ಕೇಳಿ, ಆರಾರ್–ತೃಪ್ತಿಯನ್ನು ಹೊಂದಲಾರರು.

( ಸ–ಗಾ–ರ || )—

ವೀರಶ್ರೀಯುತ–ಪಾದಪಙ್ಕಜಯುಗಂ ಸ್ವೀಯಂ ಪ್ರದರ್ಶ್ಯ ಸ್ವಯಂ
ನಾನಾದುರ್ಗತಿನಾಶಕೋ ವಿಜಯತೇ ವಾಟ್ಟಾರ್–ಪುರೇ ಶ್ರೀಧರಃ |
ಇತ್ಯೇವಂ ದಶಕಂ ತ್ವಿದಂ ಶಠರಿಪು ಸ್ಸಾಹಸ್ರಕೇ ದ್ರಾವಿಡೇ
ಶ್ರಾವ್ಯಂ ಚಾಹ ಹಿ ! ಸೂರಯೋಽಪಿ ತದಿದಂ ಶ್ರುತ್ವಾ ನ ತೃಪ್ತಾದಿವಿ ||

ತಾ|| ತನ್ನ ವೀರಗೊಲುಸುಳ್ಳ ಪಾದಗಳನ್ನು ತೋರಿಸಿ ನರಕಧ್ವಂಸವಂ ಮಾಡಿದ ತಿರುವಾಟ್ಟಾಱುಕ್ಷೇತ್ರದ ಸ್ವಾಮಿಯನ್ನು ಕುರಿತು ಶ್ರೀ ಕುರುಕಾಪುರಿಯ ಶಠಾರಿಮುನಿಯು ಸ್ತುತಿರೂಪವಾಗಿ ರಚಿಸಿದ ದ್ರಾವಿಡಪದ್ಯಮಾಲಾತ್ಮಕವಾದಸಹಸ್ರ ಗಾಥಾವಳಿಯಲ್ಲಿ ದಿವ್ಯಸೂಕ್ತಿಮಯವಾದ ಈ ದಶಕವನ್ನು ನಿತ್ಯಸೂರಿಗಳು ಕೇಳಿ ಆನಂದವಂ ಹೊಂದಿ ತೃಪ್ತಿಯಂ ಪಡೆಯಲಾರರು.

( ದ್ರ–ಉ–ಸಂ ॥ )—

ವೈಕುಣ್ಠಧಾಮನಿ ವಿವೇಕ್ಷುಷಯಿಂ ಸ್ವಮಿಾಶಂ
ತಚ್ಚ ಸ್ವಕೀಯವಿಧಿನೈವ ವಿಧಾತುಕಾಮಮ್ ।
ಪಶ್ಯನ್ಮುನಿಃ ಪ್ರಮುದಿತೋಽನುಬಭೂವ ಷಷ್ಠೇ
ವಾಙ್ಮಾಧಿಕಾಸ್ಸ್ವವಿಷಯೋಪಕೃತೀಸ್ತದೀಯಾಃ ॥

( ದ್ರ–ಉ–ತಾ–ರ ॥ )—

ಚಕ್ರಿತ್ವಾತ್ಕೇಶವತ್ವಾದಿಭಿರಪಿ ಚ ತಥಾ ಶ್ರೀಶನಾರಾಯಣತ್ವಾತ್
ಸ್ನೇಹಿತ್ವಾತ್ಪಾಣ್ಡವಾನಾಮಭಿಮತತುಲಸೀಪೂಜನೀಯತ್ವಭಾವಾತ್ ।
ಅವ್ಯೋಜಾಕ್ಷತ್ವಗೋವಿನ್ದತ ಉತ ಸುಯಶಶ್ರೀಪತಿತ್ವಾದಿಭಾವೈಃ
ಶ್ರೀಮಾಂಸ್ತ್ರೀಪ್ರೋದ್ಯನೋಽಯಂ ಸ್ವಪದವಿತರಣೇ ಚೇತಿ
ತೇನಾಭ್ಯಧಾಯಿ ॥

(ಈ ಚತುರ್ಥದಶಕದ ಸಾರಾಂಶ—)

ಈ ಆರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಮಹೋಪಕಾರಕತ್ವವನ್ನು ವರ್ಣಿಸಲು ಉದ್ದೇಶಿಸಿ, ತಿರುವಾಟ್ಟಾಱುದಿವ್ಯಕ್ಷೇತ್ರದ ಸ್ವಾಮಿಯನ್ನು ನಮಸ್ಕರಿಸುವಂತೆ ತಮ್ಮ ಮನಸ್ಸಿಗೆ ಪ್ರೇರಿಸಿ, ಅವನ ಅನುಗ್ರಹಪ್ರಕಾರಗಳನ್ನೂ, ಅವನು ಈ ದ್ರಾವಿಡ ದಿವ್ಯ ಪ್ರಬನ್ಧವನ್ನು ರಚಿಸಲು ಮಾಡಿದ ಉಪಕಾರವನ್ನೂ, ಅವನು ಪರಮಪದಕ್ಕೆ ಸೇರುವಂತೆ ಮಾಡುವ ಪ್ರಕಾರವನ್ನೂ, ಅವನು ತಮ್ಮ ಮನಸ್ಸಿನಲ್ಲಿ ನಿತ್ಯವಾಸಮಾಡುವ ರೀತಿಯನ್ನೂ, ಅವನ ನರಸಿಂಹಾವತಾರ ವೈಭವವನ್ನೂ ವಿವರಿಸಿ, ಈ ದಶಕವು ನಿತ್ಯಸೂರಿಗಳಿಗೂ ಮಹಾನನ್ದಕರವೆಂದು ಪ್ರತಿಪಾದಿಸಿ ಇರುತ್ತಾರೆ.

ಶ್ರೀಃ

# ದಶಮಶತಕದಲ್ಲಿ— ಸಪ್ತಮದಶಕ.

(ಶೆವ್ವ್‌ಶೊಲ್‌ಕವಿಕಾಳ್‌—)

(ಈ ದಶಕದಲ್ಲಿ—ಭಗವನ್ತನಿಗೆ ಆಶ್ರಿತ ವಿಷಯದಲ್ಲಿರುವ ಅಭಿನಿವೇಶಾತಿಶಯವು ವರ್ಣಿಸಲ್ಪಡುತ್ತದೆ. ಇದು ತಿರುಮಾಲಿರುಂಶೋಲೈಮಲೈಯೆಂಬ ಶ್ರೀವನಾದ್ರಿಯ ವೈಭವವಿಷಯಕವಾದ ದಶಕವು.)

---

(೧) ಶೆವ್ವ್‌ಶೊಲ್ ಕವಿಕಾಳ್‌ಉಯಿರ್‌ಕಾತ್ತಾಟ್ಚೆಯ್‌ಮ್ಮಿನ್
ತಿರುಮಾಲಿರುಂಶೋಲೈ,
ವಞ್ಜಕ್ಕಳ್ವನ್ ಮಾಮಾಯನ್ ಮಾಯಕ್ಕವಿಯಾಯ್
ವನ್ದು, ಎನ್
ನೆಞ್ಜಮುಮುಯಿರುಮುಳ್‌ಕಲನ್ದು ನಿನ್ಱಾರಱಿಯಾವಣ್ಣಮ್, ಎನ್
ನೆಞ್ಜಮುಮುಯಿರುಮವೈಯುಣ್ಡು ತಾನೇಯಾಕಿ ನಿಱೈನ್ದಾನೇ.

ಪ್ರ॥ ವಞ್ಜಕ್ಕಳ್ವನ್ – ವಂಚಿಸುವ ಚೋರನಾದ, ಮಾಮಾಯನ್–ಮಹಾ ಮಾಯಾಚೇಷ್ಟಿತನು, ಮಾಯಕ್ಕವಿಯಾಯ್ – ಕೃತ್ರಿಮಕವಿತ್ವವುಳ್ಳವನಾಗಿ, ವನ್ದು – ನಮ್ಮ ಸಮೀಪಕ್ಕೆ ಬಂದು, ಎನ್ ನೆಞ್ಜು ಉಳ್ಳುಮ್ – ನನ್ನ ಮನಸ್ಸಿನೊಳಗೂ, ಉಯಿರ್ ಉಳ್ಳುಮ್–ಆತ್ಮವಸ್ತುವಿನೊಳಗೂ, ಕಲನ್ದು–ಒಂದಾಗಿ ಸೇರಿ, ನಿನ್ಱಾರ್ – ಪಕ್ಕದಲ್ಲಿ ನಿಂತಿರುವ ಶ್ರೀದೇವೀ ಪ್ರಭೃತಿಗಳೂ, ಅಱಿಯಾವಣ್ಣಮ್ – ತಿಳಿಯದಂತೆ, ಅವೈ ಎನ್ ನೆಞ್ಜುಮ್ ಉಯಿರುಮ್ – ಆ ನನ್ನ ಮನಸ್ಸನ್ನೂ ಆತ್ಮವಸ್ತುವನ್ನೂ, ಉಣ್ಡು–ಭಕ್ಷಿಸಿ, ತಾನೇ ಆಕಿ–ತಾನೇ ಭೋಕ್ತಾವಾಗಿ ಅಲಭ್ಯವಾದ ಫಲವಂಪಡೆದು, ನಿಱೈನ್ದಾನ್ – ಪೂರ್ಣನಾದನು. ಶೆವ್ವ್ ಶೊಲ್–ರಮ್ಯವಾದ ಸೂಕ್ತಿಗಳಿಂದ, ಕವಿಕಾಳ್–ಕವಿತ್ವವಂ ಮಾಡಬಲ್ಲವರಾದ ನೀವು, ಉಯಿರ್‌ಕಾತ್ತು – ನಿಮ್ಮ ಪ್ರಾಣವನ್ನು ರಕ್ಷಿಸಿಕೊಂಡು, ತಿರುಮಾಲಿರುಂಶೋಲೈ–ಶ್ರೀವನಾದ್ರಿಯನ್ನು, ಆಟ್ಚೆಯ್ಮಿನ್–ಸೇವಿಸಿರಿ.

( ಪ-ಗಾ-ರ ॥ )—

**ಮಾಯಿನಾ ವಞ್ಚಕಸಾರ್ವಭೌಮ ಉದಿತೋ ಮಾಯಾಕವಿರ್ಮಾನಸೇ**
**ಮೇ ಜೀವೇಽಪಿ ಕಿಲ ಪ್ರವಿಶ್ಯ ರಹಸಿ ಸ್ವೈರಂ ಚ ತತ್ಸಙ್ಗತಃ।**
**ಭುಕ್ತ್ವಾ ತನ್ಮನು ಚಿತ್ತಚೇತನಯುಗಂ ಸರ್ವಂ ಸ್ವಯಂ ಸರ್ವತಃ**
**ಪೂರ್ಣೋ ಭಾತಿ! ವನಾಚಲೇಽದ್ಯ ಕವಯಸ್ತ್ರಾಣ್ಯೈಸ್ಸ್ವ ಸೇವಾನ್ವಿತಾಃ॥**

ತಾ॥ ವಂಚಕನಾದ ಚೋರನಾಗಿಯೂ ಮಾಯಾಚೇಷ್ಟಿತನಾಗಿಯೂ ಕೃತ್ರಿಮ ಕವಿತ್ವವುಳ್ಳವನಾಗಿಯೂ ನನ್ನ ಸಮೀಪಕ್ಕೆ ಬಂದು ನನ್ನ ಮನಸ್ಸಿನೊಳಗೂ ಆತ್ಮವಸ್ತುವಿನೊಳಗೂ ಒಂದಾಗಿ ಸೇರಿ ಶ್ರೀದೇವಿ ಭೂದೇವಿಗಳಿಗೂ ತಿಳಿಯದಂತೆ ನನ್ನ ಮನಸ್ಸನ್ನೂ ಆತ್ಮವಸ್ತುವನ್ನೂ ಭಕ್ಷಿಸಿ, ತಾನೇ ಅಲಭ್ಯವಾದ ಫಲವನ್ನೂ ಪಡೆದು ಭಗವನ್ತನು ಪರಿಪೂರ್ಣನಾದನು ರಮ್ಯವಾದ ಕವಿತ್ವವಂ ಮಾಡಬಲ್ಲವರಾದ ನೀವು ನಿಮ್ಮ ಪ್ರಾಣವನ್ನು ರಕ್ಷಿಸಿಕೊಂಡು ತಿರುಮಾಲಿರುಂ ಶೋಲೈಮಲೈಯೆಂಬ ಶ್ರೀವನಗಿರಿಯನ್ನು ಸೇವಿಸಿರಿ.

(೨) ತಾನೇಯಾಕಿ ನಿಱೈನ್ದೆಲ್ಲಾ ವುಲಕುಮುಯಿರುಮ್
ತಾನೇಯಾಯ್,
ತಾನೇ ಯಾನೆನ್ಬಾನಾಕಿ ತ್ತನ್ನೈತ್ತಾನೇ ತುದಿತ್ತು, ಎನಕ್ಕು
ತ್ತೇನೇ ಪಾಲೇ ಕನ್ನಲೇ ಯಮುದೇ
ತಿರುಮಾಲಿರುಂಶೋಲೈ,
ಕೋನೇಯಾಕಿ ನಿನ್ಱೊೞಿನ್ದಾನೆನ್ನೈ
ಮುಱ್ಱುಮುಯಿರುಣ್ಡೇ.

ಪ್ರ॥ ಎನ್ನೈ-ನನ್ನನ್ನು, ಮುಱ್ಱುಮ್-ಸಮಗ್ರವಾಗಿ, ಉಯಿರುಣ್ಡೇ-ಆತ್ಮ ಭೋಗವಂಮಾಡಿ, ತಾನೇ ಆಕಿ-ತಾನೇ ಪ್ರಧಾನನಾಗಿ, ನಿಱೈನ್ದು-ಪರಿಪೂರ್ಣ ನಾಗಿ, ಎಲ್ಲಾ ಉಲಕುಮ್-ಸಕಲಲೋಕಗಳೂ, ಉಯಿರುಮ್-ಸಕಲಾತ್ಮವರ್ಗ ಗಳೂ, ತಾನೇ ಆಯ್-ತಾನೇ ಎಂಬಂತೆ ಅವುಗಳಿಗೆ ಅನ್ತರಾತ್ಮಭೂತನಾಗಿ, ಯಾನೆನ್ಬಾನ್ ತಾನೇ ಆಕಿ-ನಾನೆಂಬವಸ್ತುವೂ ತಾನೇ ಆಗಿ, ತನ್ನೈ-ತನ್ನನ್ನು, ತಾನೇ ತುದಿತ್ತು-ತಾನೇ ಸ್ತೋತ್ರಮಾಡಿ, ಎನಕ್ಕು-ನನಗೆ ಅದರಿಂದ ಉಂಟಾದ, ತೇನೇ-ಮಧುವೂ, ಪಾಲೇ-ಹಾಲೂ, ಕನ್ನಲೇ - ಕಬ್ಬಿನರಸವೂ, ಅಮುದೇ-ಅಮೃತವೂ ಆಗಿ, ತಿರುಮಾಲಿರುಂಶೋಲೈಕೋನೇ ಆಕಿ - ವನಾದ್ರಿಯ ಸ್ವಾಮಿಯಾಗಿ, ನಿನ್ಱೊೞಿನ್ದಾನ್-ನಿಂತುಬಿಟ್ಟನು.

( ಸ-ಗಾ-೮ ॥ )—

ಭುಕ್ತ್ವಾತ್ರ ಜೀವಮಿಹಾಖಿಲಂ ಮಮ ಹರಿಸ್ತ್ವೈರಂ ಸ್ವಯಂ ಪೂರ್ಣ ಏ-
ವಾಽಽಸ್ತೇ ಸರ್ವಜಗನ್ಮಯೋಽಪಿ ಪರಿತಸ್ಸರ್ವಾತ್ಮವರ್ಗಾತ್ಮಕಃ ।
ಏವಂ ಚಾಹಮಪಿ ಸ್ವಯಂ ಭವತಿ ಚ ಸ್ತೋತಾಽಪಿ! ಮೇ ಮಾಕ್ಷಿಕಂ
ದುಗ್ಧಂ ಚೇಕ್ಷುರಸೋಽಮೃತಂ ಚ ವನಶೈಲೇಶೋಽಪಿ ಭಾತಿ ಸ್ಥಿರಃ ॥

ತಾ॥ ಭಗವಂತನು ಸಮಗ್ರವಾಗಿ ನನ್ನ ಆತ್ಮಭೋಗವಂಮಾಡಿ, ತಾನೇ ಪ್ರಧಾನನಾಗಿ ಪರಿಪೂರ್ಣನಾಗಿ, ಸಕಲ ಲೋಕಗಳೂ ಸಕಲಾತ್ಮವರ್ಗಗಳೂ ತಾನೇ ಎಂಬಂತೆ ಅವುಗಳಿಗೆ ಅಂತರಾತ್ಮನಾಗಿ, ನಾನೆಂಬವಸ್ತುವೂ ತಾನೇ ಆಗಿ, ತನ್ನನ್ನು ತಾನೇ ಸ್ತೋತ್ರಮಾಡಿ, ನನಗೆ ಅವರಿಂದ ಭೋಗ್ಯವಾದ ಮಧುಕ್ಷೀರೇಕ್ಷುರಸಾಮೃತರೂಪಿಯಾಗಿ, ಶ್ರೀವನಾದ್ರಿಯಸ್ವಾಮಿಯಾಗಿ ನಿಂತುಬಿಟ್ಟನು.

(೩) ಎನ್ನೈಮುೞುವದುಮುಯಿರುಣ್ಡೆನ್
ಮಾಯವಾಕ್ಕೈಯಿದನುಳ್ ಪುಕ್ಕು,
ಎನ್ನೈಮುೞುವದುಮ್ ತಾನೇಯಾಯ್ ನಿನ್ದ
ಮಾಯವಮ್ಮಾನ್ ಶೇರ್,
ತೆನ್ನನ್ ತಿರುಮಾಲಿರುಂಶೋಲೈ
ತ್ತಿಶೈಕ್ಕೈಕೂಪ್ಪಿಚ್ಚೇರ್ನ್ದ ಯಾನ್,
ಇನ್ನಮ್ ಪೋವೇನೇಕೊಲೋ ಎನ್ ಕೊಲವಮ್ಮಾನ್
ತಿರುವರುಳೇ.

ಪ್ರ॥ ಎನ್ನೈ-ನನ್ನನ್ನು, ಮುೞುವದುಮ್-ಎಲ್ಲಾ ಪ್ರಕಾರದಲ್ಲೂ, ಉಯಿರುಣ್ಡು-ಆತ್ಮಾನುಭವ ಮಾಡಿ, ಎನ್-ನನ್ನ, ಮಾಯ ಆಕ್ಕೈ-ಅಜ್ಞಾನಾದಿಗಳಿಗೆ ಕಾರಣವಾದ ಪ್ರಾಕೃತಶರೀರವೆಂಬ, ಇದನುಳ್ಪುಕ್ಕು-ಇದರೊಳು ಪ್ರವೇಶಿಸಿ, ಎನ್ನೈ-ಅಭಿಮಾನಿಯಾದ ಜೀವಾತ್ಮನಾದ ನನ್ನನ್ನು, ಮುೞುವದುಮ್-ಶರೀರಾದಿ ಸಕಲ ಪದಾರ್ಥಗಳನ್ನೂ ಆಶ್ರಯಿಸಿ, ತಾನೇಆಯ್-ತಾನೇ ಅಭಿಮಾನಿಯಾಗಿ, ನಿನ್ದ-ಕೃತಕೃತ್ಯನಾಗಿ ನಿಂತ, ಮಾಯ ಅಮ್ಮಾನ್-ಆಶ್ಚರ್ಯಗುಣ ಚೇಷ್ಟಿತಗಳುಳ್ಳ ಸ್ವಾಮಿಯು, ಶೇರ್-ಆದರದಿಂದ ವಾಸಮಾಡುವ, ತೆನ್-ದಕ್ಷಿಣದಿಕ್ಕಿನಲ್ಲಿ, ನನ್-ಶ್ಲಾಘ್ಯವಾದ, ತಿರುಮಾಲಿರುಂಶೋಲೈ-ಶ್ರೀ ವನಾದ್ರಿಯ, ತಿಶೈ-ದಿಕ್ಕನ್ನುನೋಡಿ, ಕೈಕೂಪ್ಪಿ-ಅಂಜಲಿಮಾಡಿ, ಶೇರ್ನ್ದಯಾನ್ - ಆಶ್ರಯಿಸಿದ ನಾನು, ಇನ್ನಮ್ -

ಇನ್ನೂ, ಪೋವೇನೇಕೊಲೋ–ಬೇರೆ ಕಡೆಗೆ ಹೋಗುವೆನೋ! ಅವರ್ಕ್ಕೆ–ಸ್ವಾಮಿ ಯಾದ ಅವನ, ತಿರುವರುಳೇ ಕೃಪೆಯು, ಎಱ್ಕೊಲ್–ಯಾವುದೋ!

( ಸ–ಗಾ–ರ || )—

ಭುಕ್ತ್ವಾ ಮಾಂ ಪರಿತೋಽಪಿ ಮೇಽದ್ಯತನುಮಪ್ಯಾವಿಶ್ಯ ಮಾಯಾಮಯೀಂ
ಜೀವೇ ಮೇಽಪಿ ಸಮಗ್ರ ಏವ ವಿಲಸನ್ಮಾಯಿನಾ ಚಕಾಸ್ತಿ ಪ್ರಭುಃ |
ದಾಕ್ಷೇಽಯೇ ತತ್ರ ವನಾಚಲೇ ಸುರುಚಿರೇ! ದೃಷ್ಟ್ವಾಽಪ್ಯಹಂ ತಾಂ ದಿಶಂ
ನತ್ವಾಽಪ್ಯನ್ಯತ ಏವ ಯಾಮಿ ಕಿಮಹೋ? ನಾಥಸ್ಯ ಕೀದೃಕ್ಕೃಪಾ? ||

ತಾ|| ಎಲ್ಲಾ ಪ್ರಕಾರದಲ್ಲೂ ನನ್ನ ಆತ್ಮಾನುಭವವಂಮಾಡಿ, ನನ್ನ ಅಜ್ಞಾನಾದಿಗಳಿಗೆ ಕಾರಣವಾದ ಈ ಪ್ರಾಕೃತ ಶರೀರದಲ್ಲಿ ಪ್ರವೇಶಿಸಿ, ಅಭಿಮಾನಿ ಜೀವಾತ್ಮನಾದ ನನ್ನನ್ನೂ ಶರೀರಾದಿ ಸಕಲ ಪದಾರ್ಥಗಳನ್ನೂ ಆಶ್ರಯಿಸಿ ತಾನೇ ಅಭಿಮಾನಿಯಾಗಿ ನಿಂತ ಮಾಯಾಚೇಷ್ಟಿತನಾದ ಸ್ವಾಮಿಯು ಆದರದಿಂದ ವಾಸ ಮಾಡುವ ದಕ್ಷಿಣದಿಕ್ಕಿನಲ್ಲಿರುವ ಶ್ರೀ ವನಗಿರಿಯ ದಿಕ್ಕನ್ನು ನೋಡಿ ಅಂಜಲಿಮಾಡಿ ಅದನ್ನೇ ಆಶ್ರಯಿಸಿದ ನಾನು ಬೇರೆ ಕಡೆಗೆ ಹೋಗುವೆನೋ? ನನಗೆ ಸ್ವಾಮಿ ಯಾದ ಅವನ ಕೃಪೆಯು ಎಂತಹುದೋ?

(೪) ಎಱ್ಕೊಲಮ್ಮಾಱ್ ತಿರುವರುಳ್‌ಕಳ್ ಉಲಕುಮುಯಿರುಮ್
ತಾನೇಯಾಯ್,
ನಱ್ಕೆನ್ನುಡಲಮ್ ಕೈವಿಡಾನ್ ಞಾಲತ್ತೂಡೇ ನಡನ್ದುೞಕ್ಕಿ,
ತೆನ್ಕೊೞ್ ತಿಶೈಕ್ಕು ತ್ತಿಲದಮಾಯ್ ನಿನ್ಱ
ತಿರುಮಾಲಿರುಂಶೋಲೈ,
ನಙ್ಗಳ್‌ಕುನ್ಱಮ್ ಕೈವಿಡಾನ್ ನಣ್ಣಾವಶುರರ್ ನಲಿಯುವೇ.

ಪ್ರ|| ಉಲಕುಮ್ ಉಯಿರುಮ್ – ಸಕಲ ಲೋಕಗಳೂ ಸಕಲಾತ್ಮವರ್ಗ ಗಳೂ, ತಾನೇ ಆಯ್–ತಾನೇ ಆಗುವಂತೆ ಅನ್ತರಾತ್ಮನಾಗಿ, ನಣ್ಣಾ ಅಶುರರ್–ತನ್ನನ್ನು ಆಶ್ರಯಿಸದೆ ಇರುವ ರಾಕ್ಷಸರು, ನಲಿಯುವೇ – ನಾಶಹೊಂದುವಂತೆ, ಞಾಲತ್ತೂಡೇ–ಭೂಮಿಯೊಳಗೆ, ನಡನ್ದು ಉೞಕ್ಕಿ – ನಡೆದು (ತ್ರಿವಿಕ್ರಮನಾಗಿ) ಬೆಳೆದು, ತೆನ್ಕೊೞ್–ದಕ್ಷಿಣವೆಂಬ, ತಿಶೈಕ್ಕು–ದಿಕ್ಕಿಗೆ, ತಿಲದಮಾಯ್ ನಿನ್ಱ–ತಿಲಕ ವಾಗಿ ಇರುವ, ತಿರುಮಾಲಿರುಂಶೋಲೈ–ಶ್ರೀ ವನಗಿರಿಯೆಂಬ, ನಙ್ಗಳ್ ಕುನ್ಱಮ್ –ನಮ್ಮ ಪ್ರೀತಿಪಾತ್ರವಾದ ಪರ್ವತವನ್ನು, ಕೈವಿಡಾನ್– ಕೈಬಿಡುವುದಿಲ್ಲ. ಅವನ್ಕ್ಕೆ

– ಸ್ವಾಮಿಯಾದ ಅವನ, ತಿರುವರುಳ್‌ಕಳ್ – ಉಪಕಾರಗಳಾದ ಶೀಲಗಳು, ಎ೯ಕೊಲ್–ಎಂತವುಗಳೋ !

( ಸ–ಗಾ-ರ ॥ )—

ಜೀವಾನಾಂ ಜಗತಾಂ ಚ ಮಣ್ಡಲಮಪಿ ಸ್ವೈರಂ ಸ್ವಯಂ ಯಾತಿ ಯ-
ಸ್ಸೋಽಯಂ ನಾಸ್ತಿಕರಾಕ್ಷಸಪ್ರಮಥನಸ್ಸಞ್ಚಾರಶೀಲೋ ಭುವಿ ।
ಆಸ್ತೇ ದಕ್ಷಿಣದಿಗ್ಭುವೇ ಚ ತಿಲಕಪ್ರಾಯೇ ವನಾದ್ರೌ ಪರಂ !
ದೇಹಂ ಮೇ ನ ಹಿ ಜಾತು ಚ ತ್ಯಜತಿ ! ಮೇ ನಾಥಸ್ಯ ಕೀದೃಕ್ಕೃಪಾ ? ॥

ತಾ॥ ಸಕಲಲೋಕಗಳೂ ಸಕಲಾತ್ಮವರ್ಗಗಳೂ ತಾನೇ ಎಂಬಂತೆ ಅವುಗಳಿಗೆ ಅನ್ತರಾತ್ಮನಾಗಿ, ಅನಾಶ್ರಿತರಾದ ರಾಕ್ಷಸರನ್ನು ಧ್ವಂಸಮಾಡಿ ಭಗವನ್ತನು (ತ್ರಿವಿಕ್ರಮನಾಗಿ) ಭೂಮಿಯೊಳಗೆ ನಡೆದುಬೆಳೆದು, ದಕ್ಷಿಣದಿಕ್ಕಿಗೆ ತಿಲಕಪ್ರಾಯವಾದ ಶ್ರೀವನಗಿರಿಯನ್ನು ಆಶ್ರಯಿಸಿ ಕೈಬಿಡದೆ ಇದಾನೆ. ಸ್ವಾಮಿಯಾದ ಅವನ ಉಪಕಾರಗಳು ಎಂತವುಗಳೋ !

(೫) ನಣ್ಣಾವಶುರರ್ ನಲಿವೆಯ್‌ದ ನಲ್ಲವಮರರ್ ಪೊಲಿವೆಯ್‌ದ,
ಎಣ್ಣಾದನಕಳೆಣ್ಣುಮ್ ನನ್ಮುನಿವರಿನ್ಬಮ್ ತಲೈಚ್ಚಿಱಪ್ಪ,
ಪಣ್ಣಾರ್ ಪಾಡಲಿನ್‌ಕವಿಕಳ್ ಯಾನಾಯ್ ತನ್ನೈತ್
ತಾನ್ ಪಾಡಿ,
ತೆನ್ನಾವೆನ್ನುಮೆನ್ನಮ್ಮಾನ್ ತಿರುಮಾಲಿರುಂಶೋಲೈಯಾನೇ

ಪ್ರ॥ ನಣ್ಣಾ – ಆಶ್ರಯಿಸದೆ ಇರುವ, ಆಶುರರ್ – ರಾಕ್ಷಸರು, ನಲಿವು ಎಯ್‌ದ–ನಾಶವನ್ನು ಹೊಂದುವಂತೆಯೂ, ನಲ್ಲ ಅಮರರ್–ಶ್ಲಾಘ್ಯಗುಣವುಳ್ಳ ದೇವತೆಗಳು, ಪೊಲಿವು ಎಯ್‌ದ–ಶ್ರೇಯಸ್ಸನ್ನು ಹೊಂದುವಂತೆಯೂ, ಎಣ್ಣಾದನಕಳ್–ಅಸಂಖ್ಯಾತವಾದ ಸಂಕಲ್ಪಾತಿಶಯಗಳನ್ನು, ಎಣ್ಣುಮ್ – ಆದರದಿಂದ ಚಿನ್ತಿಸುವ, ನನ್ಮುನಿವರ್ – ಒಳ್ಳೇ (ಅನುಭವವುಳ್ಳ) ಮುನಿಗಳು, ಇನ್ಬಮ್ ತಲೈಚ್ಚಿಱಪ್ಪ – ಆನನ್ದವನ್ನು ಅಧಿಕವಾಗಿ ಹೊಂದಲು, ಪಣ್‌ಆರ್ – ಗೀತಗಳು ತುಂಬಿದ, ಪಾಡಲ್– ಪದ್ಯಗಳುಳ್ಳ, ಇನ್‌ಕವಿಕಳ್–ಮಧುರವಾದ ಕವಿತ್ವರೂಪವಾದ ಕೃತಿಗಳನ್ನು, ಯಾನ್ ಆಯ್- ನಾನೇ ಆಗಿ ನಿಂತು, ತನ್ನೈ–ತನ್ನನ್ನು, ತಾನ್‌ಪಾಡಿ– ತಾನೇ ಹಾಡಿ, ತಿರುಮಾಲಿರುಂಶೋಲೈಯಾನೇ – ಶ್ರೀವನಗಿರಿಯ ಸ್ವಾಮಿಯೇ, ಎನ್ ಅಮ್ಮಾನ್ – ನನ್ನ ನಾಥನಾಗಿ, ತೆನ್ನಾ ಎನ್ನುಮ್ – ಗೀತಾನುಕರಣವನ್ನು (ತೆನ್ನಾ ಎಂದು) ಮಾಡುತ್ತಿದಾನೆ.

( ಸ-ಗಾ-ರ || )—

ನಾಶಾರ್ಥಂ ನಾಸ್ತಿಕಾನಾಂ ದಿವಿ ಚ ದಿವಿಷದಾಂ ಶ್ರೇಯಸೇಽಪ್ಯಾಸ್ತಿಕಾನಾಂ
ಪ್ರೀತ್ಯೈ ಚಾನನ್ದವೃದ್ಧ್ಯೈ ಸತತಶುಭಗಣಾಶಂಸಿನಾಂ ವೈ ಮುನೀನಾಮ್ |
ಪದ್ಯಾಳೀಹೃದ್ಯಗೀತಾವಳಿಮಪಿ ಚ ಮಮ ಸ್ವೈರಮೇವ ಸ್ವಯಂ ಶ್ರೀ-
ನಾಥೋ ಮೇ ಭಾತಿ ಗಾಯನ್ನಹಹ! ವನಗಿರೌ ಗಾನಲೋಲೋಽನುಗಾಯನ್ ||

ತಾ|| ಅನಾಸ್ತಿಕರಾದ ರಾಕ್ಷಸರು ನಾಶಹೊಂದುವಂತೆಯೂ, ಶ್ಲಾಘ್ಯರಾದ ದೇವತೆಗಳು ಶ್ರೇಯಸ್ಸನ್ನು ಹೊಂದುವಂತೆಯೂ, ಅಸಂಖ್ಯಾತವಾದ ದಿವ್ಯಸಂಕಲ್ಪಗಳನ್ನು ಮಾಡುವ ಮುನಿವರ್ಯರು ಆನನ್ದಾನುಭವವಂಮಾಡಲು ಅನುಕೂಲವಾದ ಮಧುರತಮಗೀತಾತ್ಮಕವಾದ ದಿವ್ಯಕವಿತಾರೂಪವಾದ ಕೃತಿಗಳನ್ನು ತಾನೇ ಹಾಡಿ (ನಾನೇ ತಾನು ಎಂಬಂತೆ ನಿಂತು), ಶ್ರೀವನಗಿರಿಯ ನಾಥನಾಗಿ ತೆನ್ನಾ ಎಂದು ಗೀತಾನು ಕರಣವಂ ಮಾಡುತ್ತಿದ್ದಾನೆ.

(೬) ತಿರುಮಾಲಿರುಂಶೋಲೈಯಾನೇಯಾಕಿ
ಚ್ಚೆಳುಮೂವುಲಕುಮ್, ತನ್
ಒರುಮಾವಯಿಱ್ಱಿನುಳ್ಳೇ ವೈತ್ತೂೞಿಯೂೞಿ
ತಲೈಯಳಿಕ್ಕುಮ್,
ತಿರುಮಾಲೆನ್ನೈ ಯಾಳುಮಾಲ್ ಶಿವನುಮ್
ಪಿರಮನುಮ್ ಕಾಣಾದು,
ಅರುಮಾಲೆಯ್ದಿ ಯಡಿಪರವ ಅರುಳೈಯೀನ್ದವಮ್ಮಾನೇ.

ಪ್ರ|| ಶಿವನುಮ್-ಶಿವನೂ, ಪಿರಮನುಮ್-ಬ್ರಹ್ಮನೂ, ಕಾಣಾದು-ಕಾಣದೆ, ಅರುಮಾಲ್ ಎಯ್ದಿ-ದುರ್ಲಭವಾದ ಭಕ್ತಿಯನ್ನು ಹೊಂದಿ, ಅಡಿಪರವ-ಅವನ ಪಾದಗಳನ್ನು ಸ್ತೋತ್ರಮಾಡಲು, ಅರುಳೈ ಈನ್ದ - ಅವರ ಇಷ್ಟಾರ್ಥಗಳನ್ನು ಕೊಟ್ಟ, ಅಮ್ಮಾನ್ - ಸ್ವಾಮಿಯು, ಶೆೞು ಮೂವುಲಕುಮ್ - ರಮಣೀಯವಾದ ಮೂರು ಲೋಕಗಳನ್ನೂ, ತನ್-ತನ್ನ, ಒರುಮಾ-ಅದ್ವಿತೀಯವಾಗಿ ವಿಶಾಲವಾದ, ವಯಿಱ್ಱಿನುಳ್ಳೇ ವೈತ್ತು-ಉದರದಲ್ಲಿಟ್ಟು, ಊೞಿ ಊೞಿ-ಪ್ರತಿಕಲ್ಪದಲ್ಲೂ, ತಲೈಯಳಿಕ್ಕುಮ್ - ರಕ್ಷಿಸುವವನಾಗಿ, ತಿರುಮಾಲ್ - ಶ್ರಿಯಃಪತಿಯಾದವನು, ತಿರುಮಾಲಿರುಂ ಶೋಲೈಯಾನೇ ಆಕಿ - ಶ್ರೀವನಗಿರಿಯನ್ನೇ ಆಶ್ರಯಿಸಿ, ಎನ್ನೈ ಆಳುಮ್-ನನ್ನನ್ನು ವಶೀಕರಿಸುವ, ಮಾಲ್-ಮಹಾ ವ್ಯಾಮೋಹವುಳ್ಳವನು.

( ಸ-ಗಾ-ರ ॥ )—

ಭಕ್ತ್ಯಾ ತೌ ವಿಧಿಶಙ್ಕರೌ ಪದಯುಗಂ ಸ್ತುತ್ವಾ ಚ ಯಸ್ಯ ಪ್ರಿಯೌ
ಕಾರುಣ್ಯಾತ್ಸ ಜಗತ್ತ್ರಯೀಂ ಚ ಜಠರೇ ಕೃತ್ವಾ ಸ್ವಯಂ ರಕ್ಷಕಃ ।
ಕಲ್ಪಾನ್ತೇಷ್ವಪಿ ಮಾಧವೋ ವನಗಿರೌ ಭಾತ್ಯದ್ಯ ನಾಥೋ ಮಮ
ಪ್ರೀತ್ಯಾಽಸೌ ಮಯಿ ಮೋಹಿತೋಽಸ್ತಿ ಸತತಂ! ನೈವ ತ್ಯಜೇನ್ಮಾಂ ಹರಿಃ॥

ತಾ॥ ವಿಧಿರುದ್ರಾದಿಗಳಿಗೂ ದುರ್ಲಭವಾದ ಭಕ್ತಿಯನ್ನುಂಟುಮಾಡಿ, ಅವರು ಮಾಡುವ ಸ್ತೋತ್ರಗಳಿಂದ ಸನ್ತುಷ್ಟನಾಗಿ ಅವರ ಇಷ್ಟಾರ್ಥಗಳನ್ನು ಅನುಗ್ರಹಿಸಿದ ಸ್ವಾಮಿಯು ತ್ರೈಲೋಕ್ಯವನ್ನೂ ತನ್ನ ಉದರದಲ್ಲಿಟ್ಟು ಪ್ರತಿಕಲ್ಪದಲ್ಲೂ ರಕ್ಷಿಸುವವನಾಗಿ, ಶ್ರಿಯಃಪತಿಯಾದ ಭಗವನ್ತನು ಶ್ರೀ ವನಗಿರಿಯನ್ನೇ ಆಶ್ರಯಿಸಿ ನನ್ನನ್ನು ವಶೀಕರಿಸುವ ಮಹಾವ್ಯಾಮೋಹವುಳ್ಳವನಾಗಿದಾನೆ.

(೭) ಅರುಳ್ಶೆಯಿಗಾಯೆನ್ನಮ್ಮಾನೇ ಯೆನ್ನುಮ್ .
ಮುಕ್ಕಣಮ್ಮಾನುಮ್,
ತೆರುಳ್‌ಕೊಳ್ ಪಿರಮನಮ್ಮಾನುಮ್ ತೇವರ್‌ಕೋನುಮ್
ತೇವರುಮ್,
ಇರುಳ್‌ಕಳ್ ಕಡಿಯುಮ್ ಮುನಿವರುಮೇತ್ತುಮಮ್ಮಾನ್
ತಿರುಮಲೈ,
ಮರುಳ್‌ಕಳ್ ಕಡಿಯುಮ್ ಮಣಿಮಲೈ
ತಿರುಮಾಲಿರುಂಶೋಲೈಮಲೈಯೇ.

ಪ್ರ॥ ಏ ಅಮ್ಮಾನೇ-ನನ್ನ ಸ್ವಾಮಿಯೇ!, ಅರುಳ್ಶೆ ಈ-ಕೃಪೆಯನ್ನು ಮಾಡು, ಎನ್ನುಮ್-ಎಂದು ಪ್ರಾರ್ಥಿಸುವ, ಮುಕ್ಕಣ್ ಅಮ್ಮಾನುಮ್-ತ್ರಿಣೇತ್ರನಾದ ರುದ್ರನೂ, ತೆರುಳ್‌ಕೊಳ್-ಸೃಷ್ಟಿಸಲು ತಕ್ಕ ಜ್ಞಾನವುಳ್ಳ, ಪಿರಮನ್ ಅಮ್ಮಾನುಮ್-ಬ್ರಹ್ಮದೇವನೂ, ತೇವರ್‌ಕೋನುಮ್-ದೇವೇನ್ದ್ರನೂ, ತೇವರುಮ್-ದೇವತೆಗಳೂ, ಇರುಳ್‌ಕಳ್ – ಅಜ್ಞಾನಾನ್ಧಕಾರಗಳನ್ನು, ಕಡಿಯುಮ್ (ಉಪದೇಶದಿಂದ)-ಧ್ವಂಸಮಾಡುವ, ಮುನಿವರುಮ್-ಋಷಿಗಳೂ, ಏತ್ತುಮ್-ಸ್ತೋತ್ರಮಾಡುವ, ಅಮ್ಮಾನ್-ಸ್ವಾಮಿಯ, ತಿರುಮಲೈ-ವಾಸಸ್ಥಾನವಾದ, ಮರುಳ್‌ಕಳ್-ಅಜ್ಞಾನಾದಿ ಭ್ರಾನ್ತಿಗಳನ್ನೆಲ್ಲಾ, ಕಡಿಯುಮ್-ನಾಶಪಡಿಸುವ, ಮಣಿಮಲೈ-ರಮ್ಯವಾದ ಪರ್ವತವು, ತಿರುಮಾಲಿರುಂ ಶೋಲೈಮಲೈಯೇ-ಶ್ರೀ ವನಗಿರಿಯೆಂಬ ಪರ್ವತವೇ.

( ಸ-ಗಾ-ರ ॥ )—

ಕಾರುಣ್ಯಂ ಮಯಿ ದರ್ಶಯೇಶ್ವರ! ದಯಾಸಿನ್ಧೋ! ಜಗನ್ನಾಯಕೇ-
ತ್ಯೇವಂ ರುದ್ರಚತುರ್ಮುಖೌ ಶತಮುಖೋ ದೇವಾ ಮುನೀನ್ದ್ರಾ ಅಪಿ ।
ಯಂ ಶಂಸನ್ತಿ ಸದಾಽಪಿ ತಸ್ಯ ಸತತಂ ವಾಸಾಶ್ರಯೋ ಭಾಸ್ವರೋ
ರಮ್ಯೋ ಮೋಹವಿನಾಶಕೋ ಗಿರಿರಯಂ ನಾಮ್ನಾ ವನಾದ್ರಿಸ್ತ್ವಯಮ್ ॥

ತಾ॥ "ನನ್ನ ಸ್ವಾಮಿಯೇ ! ನನ್ನಲ್ಲಿ ಕೃಪೆಮಾಡು"—ಎಂದು ಪ್ರಾರ್ಥಿಸುವ ಬ್ರಹ್ಮರುದ್ರೇನ್ದ್ರಾದಿ ದೇವತೆಗಳೂ ಅಜ್ಞಾನನಾಶಕರಾದ ಋಷಿಗಳೂ ಸ್ತೋತ್ರ ಮಾಡುವ ಸ್ವಾಮಿಯ ವಾಸಸ್ಥಾನವಾದ (ಭ್ರಾನ್ತಿನಿವಾರಕವಾದ) ರಮ್ಯಪರ್ವತವು ಶ್ರೀ ವನಗಿರಿಯೇ.

(೮) ತಿರುಮಾಲಿರುಂಶೋಲೈಮಲೈಯೇ ತಿರುಪ್ಪಾಱ್ಕಡಲೇ
ಯೆನ್ತಲೈಯೇ
ತಿರುಮಾಲ್ ವೈಕುನ್ದಮೇ ತಣ್ತಿರುವೇಙ್ಗಡಮೇ
ಯೆನದುಡಲೇ,
ಅರುಮಾಮಾಯತ್ತೆನದುಯಿರೇ ಮನಮೇ ವಾಕ್ಕೇ
ಕರುಮಮೇ,
ಒರುಮಾನೊಡಿಯುಮ್ ಪಿರಿಯಾನೆನ್ನೂೞಿ
ಮುದಲ್ವನೊರುವನೇ.

ಪ್ರ॥ ತಿರುಮಾಲಿರುಂ ಶೋಲೈಮಲೈಯೇ – ಶ್ರೀವನಾದ್ರಿಯನ್ನೂ, ತಿರುಪ್ಪಾಱ್ಕಡಲೇ–ಕ್ಷೀರಾಬ್ಧಿಯನ್ನೂ, ಎನ್ತಲೈಯೇ–ನನ್ನ ತಲೆಯನ್ನೂ, ತಿರುಮಾಲ್ ವೈಕುನ್ದಮೇ – ಶ್ರಿಯಃಪತಿಯಾದ ಅವನ ಪರಮಪದವನ್ನೂ, ತಣ್ ತಿರುವೇಙ್ಗಡಮೇ–ಶೀತಳವಾದ ಶ್ರೀ ವೇಙ್ಕಟಾದ್ರಿಯನ್ನೂ, ಎನದುಡಲೇ–ನನ್ನ ಶರೀರವನ್ನೂ, ಅರುಮಾ- ದುರ್ಲಭವಾಗಿಯೂ ಮಹತ್ತಾಗಿಯೂ ಇರುವ,ಮಾಯತ್ತು–ಆಶ್ಚರ್ಯಪ್ರಕೃತಿಯುಳ್ಳ, ಎನದುಯಿರೇ – ನನ್ನ ಆತ್ಮವಸ್ತುವನ್ನೂ, ಮನಮೇ–ಮನಸ್ಸನ್ನೂ, ವಾಕ್ಕೇ–ವಾಕ್ಕನ್ನೂ, ಕರುಮಮೇ–ಕಾರ್ಯವನ್ನೂ, ಒರುಮಾನೊಡಿಯುಮ್–ಒಂದು ಕ್ಷಣಕಾಲವೂಕೂಡ, ಪಿರಿಯಾನ್–ಬಿಟ್ಟಿರಲಾರನು. ಎನ್–ನನ್ನ, ಊೞಿಮುದಲ್ವನ್ – ಕಲ್ಪಾದಿಯಲ್ಲಿ ಜಗತ್ಕಾರಣಭೂತನಾದ ಆ ಸ್ವಾಮಿಯು, ಒರುವನೇ–ಒಬ್ಬನೇ ಅಲ್ಲವೆ !

( ಸ-ಗಾ-ರ ॥ )

ಶ್ರೀಮನ್ತಂ ಚ ವನಾದ್ರಿಮದ್ಭುತತಮಂ! ಕ್ಷೀರಾಮ್ಬುಧಿಂ! ಮಸ್ತಕಂ
ಮೇ! ವಿಷ್ಣೋಃ ಪರಮಂ ಪದಂ ಚ ಕಮಲಾಕಾನ್ತಸ್ಯ! ಶೇಷಾಚಲಮ್ |
ದೇಹಂ ಜೀವಮಪೀಹ ಮೇಽತ್ರ ಹೃದಯಂ ವಾಚಂ ಕೃತಿಂ ಚಾಚ್ಯುತೋ
ನೈವಾಸೌ ತ್ಯಜತಿ ಕ್ಷಣಂ ಚ ಜಗತಾಮೀಶಂ ಪರಂ ಕಾರಣಮ್ ॥

ತಾ॥ ಶ್ರೀ ವನಗಿರಿಯನ್ನೂ, ಕ್ಷೀರಾಬ್ಧಿಯನ್ನೂ, ನನ್ನ ತಲೆಯನ್ನೂ, ಪರಮಪದವನ್ನೂ, ಶ್ರೀ ವೇಙ್ಕಟಾದ್ರಿಯನ್ನೂ, ನನ್ನ ಶರೀರವನ್ನೂ, ಮಾಯಾತ್ಮಕವಾದ ನನ್ನ ಆತ್ಮವಸ್ತುವನ್ನೂ, ಮನೋವಾಕ್ಕರ್ಮಗಳನ್ನೂ ಅವನು ಒಂದು ಕ್ಷಣವೂ ಬಿಟ್ಟಿರಲಾರನು. ಜಗತ್ಕಾರಣಭೂತನಾದ ಆ ನನ್ನ ಸ್ವಾಮಿಯು ಒಬ್ಬನೇ ಸರ್ವೇಶ್ವರನಾಗಿದಾನೆ.

(೯) ಊೞಿಮುದಲ್ವನೊರುವನೇ ಯೆನ್ನುಮೊರುವನುಲ
ಕೆಲ್ಲಾಮ್,
ಊೞಿತೋಱುಮ್ ತನ್ನುಳ್ಳೇ ಪಡೈತ್ತು
ಕಾತ್ತುಕ್ಕೆಡುತ್ತುೞಲುಮ್,
ಆೞಿವಣ್ಣನೆನ್ನಮ್ಮಾನನ್ತಣ್ ತಿರುಮಾಲಿರುಂಶೋಲೈ,
ವಾೞಿಮನಮೇ ಕೈವಿಡೇಲುಡಲುಮುಯಿರುಮ್
ಮಙ್ಗವೊಟ್ಟೇ.

ಪ್ರ॥ ಊೞಿ-ಕಲ್ಪಸೃಷ್ಟವಾದ ಸಮಸ್ತವಸ್ತುಗಳಿಗೂ, ಮುದಲ್ವನ್-ಕಾರಣಭೂತನು, ಒರುವನೇ-ಒಬ್ಬನೇ, ಎನ್ನುಮ್- ಎಂದುಶ್ರುತಿಯಲ್ಲಿ ಪ್ರತಿಪಾದಿತವಾದ, ಒರುವನ್-ಅದ್ವಿತೀಯನಾದ, ಉಲಕೆಲ್ಲಾಮ್-ಸಕಲಲೋಕಗಳನ್ನೂ, ಊೞಿತೋಱುಮ್-ಸೃಷ್ಟ್ಯಾದಿಕಾಲದಲ್ಲೆಲ್ಲಾ, ತನ್ನುಳ್ಳೇ-ತನ್ನ ಸಙ್ಕಲ್ಪದಿಂದಲೇ, ಪಡೈತ್ತು-ಸೃಷ್ಟಿಸಿ, ಕಾತ್ತು-ರಕ್ಷಿಸಿ, ಕೆಡುತ್ತು-ಸಂಹರಿಸಿ, ಉೞಲುಮ್-ಇದೇ ಯಾತ್ರೆಯಾಗಿ ನಡೆಸುವ, ಆೞಿವಣ್ಣನ್- ಸಮುದ್ರದಂತೆ (ಗಂಭೀರಸ್ವಭಾವನಾದ) ನೀಲವರ್ಣನಾದ, ಎನ್ ಅಮ್ಮಾನ್ - ನನ್ನ ಸ್ವಾಮಿಯ, ಅಮ್-ರಮ್ಯವಾದ, ತಣ್-ಶೀತಳವಾದ, ತಿರುಮಾಲಿರುಂಶೋಲೈ - ಶ್ರೀವನಾದ್ರಿಯನ್ನು, ಮನಮೇ-ಎಲೈ ಮನಸ್ಸೇ, ಉಡಲುಮ್-ಶರೀರವೂ, ಉಯಿರುಮ್ - ಆತ್ಮವಸ್ತುವೂ, ಮಙ್ಗಲಯಿಸುವಂತೆ, ಒಟ್ಟು- ನೀನು ಆಶ್ರಯಿಸು. ಕೈವಿಡೇಲ್-ಕೈಬಿಡಬೇಡ, ವಾೞಿ-ಹೀಗೆ ನಡೆದರೆ ನೀನು ಚೆನ್ನಾಗಿ ಬಾಳುತ್ತೀಯೆ.

(ಸ–ಗಾ–ರ || )—

ಸರ್ವೇಷಾಂ ಜಗತಾಂ ಯ ಆದಿರಖಿಲಂ ವಿಶ್ವಂ ಸೃಜನ್ ಪಾಲಯನ್
ಕಲ್ಪೇಷ್ವೇವ ವಿನಾಶಯನ್ನಪಿ ಚರತ್ಯೇವಂ ಪ್ರಭುರ್ನೋ ಹರಿಃ |
ಗಮ್ಭೀರಾಮ್ಬುಧಿವರ್ಣ ಏಷ ಜಯತಿ ಶ್ರೀಮಾನ್ ವನಾದ್ರೌ ಶುಭೇ!
ಹೇ ಚಿತ್ತ! ತ್ವಮಿಮಂ ಗಿರಿಂ ಭಜ ಸದಾ ತೇ ಸ್ವಸ್ತಿ! ಮೋಕ್ಷೋ ಭವೇತ್||

ತಾ|| ಸಕಲ ಪದಾರ್ಥಗಳಿಗೂ ಕಾರಣಭೂತನು ಒಬ್ಬನೇ ಎಂದು ಶ್ರುತಿ ಪ್ರತಿಪಾದಿತವಾದ ಅದ್ವಿತೀಯನಾದ, ಸಕಲ ಲೋಕಸೃಷ್ಟಿ ಸ್ಥಿತಿಸಂಹಾರಕರ್ತನಾದ ಸಮುದ್ರವರ್ಣನಾದ ನನ್ನ ಸ್ವಾಮಿಯು ರಮ್ಯವಾಗಿ ಶೀತಳವಾಗಿರುವ ವಾಸಸ್ಥಲವಾದ ಶ್ರೀವನಾದ್ರಿಯನ್ನು—ಎಲೈ ಮನಸ್ಸೇ! ನೀನು ಶರೀರಾತ್ಮಲಯವುಂಟಾಗುವಂತೆ ಆಶ್ರಯಿಸು, ಕೈಬಿಡಬೇಡ—ಹೀಗೆ ಮಾಡಿದರೆ ನೀನು ಚೆನ್ನಾಗಿ ಬಾಳುತ್ತೀಯೆ.

(೧೦) ಮಙ್ಗವೊಟ್ಟುನ್ ಮಾಮಾಯೈ ತಿರುಮಾಲಿರುಂಶೋಲೈ
ಮೇಯ,
ನಙ್ಗಳ್‌ಕೋನೇ ಯಾನೇ ನೀಯಾಕಿ ಯೆನ್ನೈ ಯಳಿತ್ತಾನೇ,
ಪೊಙ್ಗೈಮ್ಬುಲನುಮ್ ಪೊರಿಯೈನ್ದುಮ್
ಕರುಮೇನ್ದಿರಿಯಮೈಮ್‌ಪೂದಮ್,
ಇಙ್ಗಿವ್ವುಯಿರೇಯ್ ಪಿರಕಿರುದಿ ಮಾನಾಙ್ಗಾರಮನಙ್ಗಳೇ.

ಪ್ರ|| ತಿರುಮಾಲಿರುಂ ಶೋಲೈ - ಶ್ರೀವನಗಿರಿಯಲ್ಲಿ, ಮೇಯ – ನಿತ್ಯವಾಸಮಾಡುವ, ನಙ್ಗಳ್‌ಕೋನೇ-ನಮ್ಮ ಸ್ವಾಮಿಯೇ!, ಯಾನೇ ನೀ ಆಕಿ-ನಾನೇ ನೀನು ಆಗಿ, ಎನ್ನೈ-ನನ್ನನ್ನು, ಅಳಿತ್ತಾನೇ-ರಕ್ಷಿಸಿದವನೇ, ಪೊಙ್ಗು-ಭೋಗ್ಯವಾಗಿ ತೋರುವ, ಐಮ್‌ಪುಲನುಮ್-ಐದು (ಶಬ್ದಾದಿ) ವಿಷಯಗಳೂ, ಪೊರಿಐನ್ದುಮ್-ಐದು ಜ್ಞಾನೇನ್ದ್ರಿಯಗಳೂ, ಕರುಮೇನ್ದಿರಿಯಮ್–ಐದು ಕರ್ಮೇನ್ದ್ರಿಯಗಳೂ, ಐಮ್‌ಪೂದಮ್–ಪಂಚಭೂತಗಳೂ, ಇಙ್ಗು–ಈ ಸಂಸಾರದಶೆಯಲ್ಲಿ, ಇವ್ವುಯಿರ್ ಏಯ್–ಈ ಆತ್ಮವಸ್ತುವಿನೊಡನೆ ಸ್ಪೃಷ್ಟವಾದ, ಪಿರಕಿರುದಿ – ಪ್ರಕೃತಿ, ಮಾನ್–ಮಹತ್ತತ್ತ್ವ, ಆಙ್ಗಾರ–ಅಹಙ್ಕಾರ, ಮನಙ್ಗಳೇ – ಮನಸ್ಸು ಎಂಬಿವುಗಳೆಲ್ಲಾ, ಉನ್ ಮಾಮಾಯೈ - ನಿನ್ನ ಮಹಾಮಾಯಾತ್ಮಕವಾದ ಪ್ರಾಕೃತಪದಾರ್ಥಗಳು, ಮಙ್ಗ ಒಟ್ಟು - ನಶಿಸುವಂತೆ ಮಾಡು. (ಇವುಗಳನ್ನೆಲ್ಲಾ ಸಂಹಾರಮಾಡಿ ಆತ್ಮೋಜ್ಜೀವನವನ್ನು ಉಂಟುಮಾಡು.)

( ಸ-ಗಾ-ರ || )—

ಸ್ವಾಮಿನ್! ಮೇ ವನಗಿರ್ಯಧೀಶ! ಯದಹಂ ಭೂತ್ವಾ ತ್ವಮೇವಾಚ್ಯುತ !
ಶ್ರೀಮನ್! ಪಾಲಯಸೀಹ ಮಾಂ ಚ! ವಿಷಯಾನ್ ಜ್ಞಾನೇನ್ದ್ರಿಯಾಣಾಂ ಗಣಮ್ |
ತತ್ಕರ್ಮೇನ್ದ್ರಿಯಪಞ್ಚಕಂ ಚ ದಳಯನ್ ಭೂತಾನಿ ಪಞ್ಚಾಪಿ ಚ
ತ್ವಂ ಮೂಲಪ್ರಕೃತಿಂ ಮಹಾನ್ತಮಪಿ ಚಾಹಙ್ಕಾರಚಿತ್ತೇ ಜಹಿ||

ತಾ|| ಶ್ರೀವನಗಿರಿಯಲ್ಲಿ ನಿತ್ಯವಾಸಮಾಡುವ ನಮ್ಮ ಸ್ವಾಮಿಯೇ! ನಾನೇ ನೀನಾಗಿ ನನ್ನನ್ನು ರಕ್ಷಿಸಿದವನೇ! ಶಬ್ದಾದಿ ಪಞ್ಚವಿಷಯಗಳೂ, ಪಞ್ಚಜ್ಞಾನೇನ್ದ್ರಿಯಗಳೂ, ಪಞ್ಚಕರ್ಮೇನ್ದ್ರಿಯಗಳೂ, ಪಞ್ಚಭೂತಗಳೂ, ಪ್ರಕೃತಿಮಹದಹಙ್ಕಾರಮನಸ್ತತ್ತ್ವಗಳೂ ಈ ನಿನ್ನ ಮಹಾಮಾಯಾತ್ಮಕವಾದ ಪದಾರ್ಥಗಳೆಲ್ಲಾ ನಶಿಸುವಂತೆ ಮಾಡು (ಇವುಗಳನ್ನೆಲ್ಲಾ ನಾಶಪಡಿಸಿ ಆತ್ಮೋಜ್ಜೀವನವನು ಉಂಟುಮಾಡು.)

(೧೧) ಮಾನಾಙ್ಗಾರಮನಙ್ಕೆಡ ಐವರ್ ವನ್ಕೈಯರ್ ಮಙ್ಗ,
ತಾನಾಙ್ಗಾರಮಾಯ್ ಪ್ಪುಕ್ಕು ತಾನೇತಾನೇ ಯಾನಾನ್ಯೈ,
ತೇನಾಙ್ಗಾರಪ್ಪೊಳಿಲ್ ಕುರುಕೂರ್ ಚ್ಚಡಕೋಪನ್
ಶೊಲ್ಲಾಯಿರತ್ತುಳ್,
ಮಾನಾಙ್ಗಾರತ್ತಿವೈಪತ್ತುಮ್ ತಿರುಮಾಲಿರುಂಶೋಲೈ
ಮಲೈಕ್ಕೇ.

ಪ|| ಮಾನ್ ಆಙ್ಗಾರಮನಮ್-ಮಹದಹಙ್ಕಾರಚಿತ್ತಗಳು, ಕೆಡ-ನಶಿಸುವಂತೆ, ವನ್ ಕೈಯರ್-ಪ್ರಬಲವಾದ, ಐವರ್-ಪಂಚೇನ್ದ್ರಿಯಗಳು, ಮಙ್ಗ-ನಾಶಹೊಂದುವಂತೆ, ತಾನ್ ಆಙ್ಗಾರಮಾಯ್ ಪುಕ್ಕು-ತಾನೇ ಅಭಿಮಾನಿಯಾಗಿ ಪ್ರವೇಶಿಸಿ, ತಾನೇ ತಾನೇ ಆನಾನ್ಯೈ-ಆತ್ಮಾತ್ಮೀಯವಸ್ತುಗಳೆಲ್ಲಾ ತಾನೇಆದವನನ್ನು, ತೇನ್ ಆಙ್ಗಾರ-ಮಧುಕರಗಳಾದ ದುಂಬಿಗಳ ಅಹಂಕೃತಿಝುಂಕಾರವುಳ್ಳ, ಪೊಳಿಲ್-ಉದ್ಯಾನಗಳಿಂದ ಕೂಡಿದ, ಕುರುಕೂರ್-ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್-ಶಠಾರಿಮುನಿಯ, ಶೊಲ್ ಆಯಿರತ್ತುಳ್-ಸೂಕ್ತಿರೂಪವಾದ ಸಹಸ್ರಪದ್ಯಾವಳಿಯಲ್ಲಿ, ಮಾನಾಙ್ಗಾರತ್ತು-ಮಹದಹಙ್ಕಾರ ನಿವೃತ್ತಿಪರವಾದ, ಇವೈಪತ್ತುಮ್-ಈ ದಶಕವು, ತಿರುಮಾಲಿರುಂ ಶೋಲೈಮಲೈಕ್ಕೇ-ಶ್ರೀವನಗಿರಿಯನ್ನು ಕುರಿತು (ಸ್ತುತಿರೂಪವಾಗಿ) ರಚಿತವಾದುದು.

( ಸ–ಗಾ–ರ || )—

ನಾಶಾರ್ಥಂ ಮಹತೋಽಪ್ಯಹಙ್ಕೃತಿಮನಸ್ತತ್ತ್ವದ್ವಯಸ್ಯಾಪ್ಯಸೌ
ನಾಶಾಯೇನ್ದ್ರಿಯಪಞ್ಚಕಸ್ಯ ವಿಷಯೈರ್ಭೂತ್ವಾಽಭಿಮಾನೀ ಸ್ವಯಮ್ |
ಆತ್ಮಾತ್ಮೀಯಮಪಿ ಸ್ವಯಂ ಭವತಿ ಯಸ್ತಂ ಶ್ರೀಶಠಾರಿರ್ಜಗೌ
ಸಾಹಸ್ರೇ ದಶಕಂ ಕಿಲಾಹ ತದಿದಂ ಮುಕ್ತ್ಯೈ ವನಾದ್ರಿಂ ಪ್ರತಿ ||

ತಾ|| ಮಹದಹಙ್ಕಾರಚಿತ್ತಗಳು ನಶಿಸುವಂತೆ, ಪ್ರಬಲವಾದ ಪಞ್ಚೇನ್ದ್ರಿಯಗಳು ನಶಿಸುವಂತೆ, ತಾನೇ ಅಭಿಮಾನಿಯಾಗಿ ಪ್ರವೇಶಿಸಿ, ಆತ್ಮಾತ್ಮೀಯವಸ್ತುಗಳೆಲ್ಲಾ ತಾನೇ ಆದ ಸ್ವಾಮಿಯನ್ನು ಮಧುಕರಝುಙ್ಕಾರಭರಿತೋದ್ಯಾನ ಪರಿವೃತವಾದ ಕುರುಕಾಪುರಿಯ ಶಠಾರಿಮುನಿಯು ಸ್ತುತಿಸಲು ರಚಿಸಿದ ಸಹಸ್ರಪದ್ಯಾವಳಿಯಲ್ಲಿ ಮಹದಹಙ್ಕಾರನಿವೃತ್ತಿಪರವಾದ ಈ ದಶಕವು ಶ್ರೀ ವನಗಿರಿಯ ವೈಭವ ವಿಷಯಕವಾದುದು.

( ದ್ರು–ಉ–ಸಂ || )—

ಅಸ್ಮಿನ್ನುಪೈಷ್ಯಮುಮಿತಿ ಸ್ವಶರೀರಲೋಲ–
ತದ್ದೋಷಮುಗ್ಧಮಪಿ ತತ್ತ್ಯಜನೇ ಸ್ವಯಾಚ್ಞಾಮ್ |
ಸಾರ್ಥಾಂ ಚಿಕೀರ್ಷುರಧಿಗಮ್ಯ ಹರಿಂ ತದೀಯೇ
ಶೀಲೇ ಮುನಿಸ್ಸ ಖಲು ಸಪ್ತಮತೋ ಮಮಜ್ಜ ||

( ದ್ರು–ಉ–ತಾ–ರ || )—

ಆತ್ಮಾಶ್ಚರ್ಯಸ್ವಭಾವಾದ್ಧೃದಯಗತತಯಾ ಸ್ವಸ್ಮೃತೌ ಪ್ರೇರಕತ್ವಾತ್
ಸ್ವಾಮಿತ್ವಾತ್ ಸರ್ವಭೂತಾನ್ತರನುಗತತಯಾ ಸ್ವಸ್ಮೃತೌ ಕರ್ತೃಭಾವಾತ್ |
ಆಪದ್ಯನ್ಯತ್ವಯೋಗಾದ್ಬಹುವಿಧಸವಿಧಸ್ಥಾನವತ್ತ್ವೇನ ದೇವಃ
ಶ್ರೀಮಾನತ್ಯಾದರಸ್ಸ್ಯಾತ್ ಸ್ವಜನಪರಿಕರೇಷ್ವಿತ್ಯಥೋ! ಸಂಜಗಾದ ||

(ಈ ಸಪ್ತಮದಶಕದ ಸಾರಾಂಶ—)

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನಿಗೆ ಆಶ್ರಿತ ವಿಷಯದಲ್ಲಿರುವ ಪ್ರೇಮಾತಿಶಯವನ್ನು ವರ್ಣಿಸಲು ಆರಂಭಿಸಿ, ಶ್ರೀವನಗಿರಿಯ ವೈಭವವನ್ನು ಸ್ತುತಿಸಿ ಅಲ್ಲಿ ನಿತ್ಯವಾಸಮಾಡುವ ಸ್ವಾಮಿಯನ್ನು ಸೇವಿಸುವಂತೆ ತಮ್ಮ ಮನಸ್ಸಿಗೆ ಪ್ರೇರಿಸಿ, ಅವನು ಮಾಡಿದ ಮಹೋಪಕಾರಗಳನ್ನೆಲ್ಲಾ ವಿವರಿಸಿ, ಅವನೇ ತಮ್ಮ ದಿವ್ಯಕವಿತೆಯನ್ನೂ ಮಾಡಿ ಗೀತಗಳನ್ನೂ ಹಾಡಿ ತಮ್ಮಲ್ಲಿ ಅತ್ಯನ್ತ ವ್ಯಾಮೋಹವುಳ್ಳವನಾಗಿದಾನೆಂದು ವಿಶದೀಕರಿಸಿ, ಅವನ ಮಾಯಾಚೇಷ್ಟಿತಗಳನ್ನೆಲ್ಲಾ ಪ್ರತಿಪಾದಿಸಿ, ಆತ್ಮೋಜ್ಜೀವನಕ್ಕಾಗಿ ಅವನನ್ನೇ ಪ್ರಾರ್ಥಿಸಿ ಆಶ್ರಯಸಿ ಇರುತ್ತಾರೆ.

——:❀:——

ಶ್ರೀಃ

# ದಶಮಶತಕದಲ್ಲಿ—ಅಷ್ಟಮದಶಕ.

## (ತಿರುವಮಾಲಿರುಂ ಶೋಲೈಮಲೈ—)

(ಈ ದಶಕದಲ್ಲಿ—ಶ್ರೀ ಭಗವನ್ತನು ಭಕ್ತರ ವಿಷಯದಲ್ಲಿ ಮಾಡುವ ಪೂರ್ಣಾನುಗ್ರಹ ಕಾರವು ವರ್ಣಿಸಲ್ಪಡುತ್ತದೆ. ಇದು ತೇ ತಿರುಪ್ಪೇರ್ ಎಂಬ ಶ್ರೀನಾಮಪುರೀ ದಿವ್ಯದೇಶವಿಷಯಕವಾದುದು.)

---

(೧) ತಿರುಮಾಲಿರುಂಶೋಲೈ ಮಲೈಯೆನ್ನೇನೆನ್ನ,
ತಿರುಮಾಲ್ವನ್ದೆನ್ನೆಞ್ಜು ನಿಱೈಯ ಪ್ಪುಕುನ್ದಾನ್,
ಕುರುಮಾಮಣಿಯುನ್ದು ಪುನಲ್ಪೊನ್ನಿತ್ತೆಱ್ಪಾಲ್,
ತಿರುಮಾಲ್ಶೆನ್ಱು ಶೇರ್ವಿಡಮ್ ತೆಱ್ತಿರುಪ್ಪೇರೇ.

ಪ್ರ|| ತಿರುಮಾಲಿರುಂ ಶೋಲೈಮಲೈ ಎನ್ನೇನೆನ್ನ-ಶ್ರೀವನಗಿರಿಯೆಂದು ಹೇಳಿದ ಒಡನೇ, ತಿರುಮಾಲ್-ಶ್ರಿಯಃಪತಿಯು, ವನ್ದು-ಬಂದು, ಎನ್ ನೆಞ್ಜಮ್-ನನ್ನ ಮನಸ್ಸಿನೊಳಗೆ, ನಿಱೈಯ - ಪರಿಪೂರ್ಣವಾಗಿ, ಪುಕುನ್ದಾನ್ - ಪ್ರವೇಶಿಸಿದನು. ತಿರುಮಾಲ್ - ಶ್ರಿಯಃಪತಿಯಾದವನು, ಶೆನ್ಱು ಶೇರ್ವು ಇಡಮ್-ಹೋಗಿ ಶಯನ ಮಾಡಿರುವ ಸ್ಥಲವು, ಕುರುಮಾಮಣಿ-ಶ್ಲಾಘ್ಯವಾದ ಮಾಣಿಕ್ಯಗಳನ್ನು, ಉನ್ದು-ತಂದು ಸುರಿಯುವ, ಪುನಲ್-ಪ್ರವಾಹವುಳ್ಳ, ಪೊನ್ನಿ-ಕಾವೇರಿಯ, ತೆನ್ಪಾಲ್-ದಕ್ಷಿಣದಿಕ್ಕಿನಲ್ಲಿರುವ, ತೇ ತಿರುಪ್ಪೇರೇ-ಶ್ರೀನಾಮಪುರಿಯೇ.

(ಸ-ಗಾ-ರ || )—

ಶ್ರೀಮದ್ವನಾದ್ರಿಶುಭಕೀರ್ತನತಃ ಪರಾತ್ಮಾ
ಚಿತ್ತೇ ಪ್ರವಿಶ್ಯ ಮಮ ಭಾತಿ ಚ ಮಾಧವೋಽಯಮ್ |
ಅಸ್ಯೇದಮೇವ ನಗರಂ ಮಣಿವಾಹಿ-ನದ್ಯಾ-
ಸ್ತೀರೇ ಶುಭಂ ಲಸತಿ ನಾಮಪುರಾಭಿಧಾನಮ್ ||

ತಾ॥ ಶ್ರೀವನಾದ್ರಿಯೆಂದು ಹೇಳಿದ ಒಡನೇ ಶ್ರಿಯಃಪತಿಯು ಬಂದು ನನ್ನ ಮನಸ್ಸಿನೊಳಗೆ ಪೂರ್ಣವಾಗಿ ಪ್ರವೇಶಿಸಿದನು. ಶ್ರಿಯಃಪತಿಯು ಹೋಗಿ ಶಯನ ಮಾಡಿರುವ ಸ್ಥಲವು ಮಾಣಿಕ್ಯಭರಿತವಾದ ಕಾವೇರಿಯ ದಕ್ಷಿಣದಿಕ್ಕಿನಲ್ಲಿರುವ ಶ್ರೀನಾಮಪುರಿಯೇ.

(೨) ಪೇರೇ ಯುಱೈಕಿನ್ಱ ಪಿರಾನಿನ್ಱುವನ್ದು,
ಪೇರೇನೆನ್ಱೆನ್ನೆಞ್ಜುನಿಱೈಯಪ್ಪುಕುನ್ದಾನ್,
ಕಾರೇೞ್ ಕಡಲೇೞ್ ಮಲೈಯೇೞುಲಕುಣ್ಡುಮ್,
ಆರಾವಯಿಱ್ಱಾನೈ ಯಡಙ್ಗಪ್ಪಿಡಿತ್ತೇನೇ.

ಪ್ರ॥ ಪೇರೇ – ಶ್ರೀನಾಮಪುರಿಯಲ್ಲಿ, ಉಱೈಕಿನ್ಱ – ವಾಸಮಾಡುತ್ತಿರುವ, ಪಿರಾನ್–ಸರ್ವೇಶ್ವರನು, ಇನ್ಱುವನ್ದು – ಈದಿನ ತಾನೇ ಬಂದು, ಪೇರೇನ್ ಎನ್ಱು–ಇನ್ನು ಮೇಲೆ ಬಿಡಲಾರೆನೆಂದು, ಎನ್ ನೆಞ್ಜು–ನನ್ನ ಮನಸ್ಸಿನೊಳಗೆ, ನಿಱೈಯ–ಪರಿಪೂರ್ಣವಾಗಿ, ಪುಕುನ್ದಾನ್–ಪ್ರವೇಶಿಸಿದನು. ಕಾರೇೞ್–ಸಪ್ತಮೇಘಗಳನ್ನೂ, ಕಡಲೇೞ್–ಸಪ್ತಸಮುದ್ರಗಳನ್ನೂ, ಮಲೈಯೇೞ್–ಸಪ್ತಪರ್ವತಗಳನ್ನೂ ಉಳ್ಳ, ಉಲಕು ಉಣ್ಡುಮ್–ಸರ್ವಲೋಕಗಳನ್ನೂ ಭಕ್ಷಿಸಿಯೂ, ಆರಾವಯಿಱ್ಱಾನೈ–ತುಂಬದೆ ಇರುವ ಉದರವುಳ್ಳವನನ್ನು, ಅಡಙ್ಗ–ನನ್ನಲ್ಲಿ ಅಡಗಿ ಇರುವಂತೆ, ಪಿಡಿತ್ತೇನೇ–ಹಿಡಿದು ಆಶ್ರಯಿಸಿ ಅನುಭವಿಸಿದೆನು.

( ಸ–ಗಾ–ರ ॥ )—

ಶ್ರೀನಾಮಪುರ್ಯಧಿಪತಿಃ ಪರಮಃ ಪ್ರಭುರ್ಮೇ
ಚಿತ್ತೇ ಪ್ರವಿಶ್ಯ ಕೃಪಯಾ ಸ್ಥಿರಮೇವ ಪೂರ್ಣಃ ।
ಸಪ್ತಾಮ್ಬುದಾಮ್ಬುಧಿಗಿರೀನಪಿ ಸರ್ವಲೋಕಾನ್
ಭುಕ್ತ್ವಾಪ್ಯತೃಪ್ತಮಪಿ ತಂ ಮಯಿ ಧಾರಯಾಮಿ ॥

ತಾ॥ ಶ್ರೀನಾಮಪುರಿಯಲ್ಲಿ ವಾಸಮಾಡುತ್ತಿರುವ ಸರ್ವೇಶ್ವರನು ಈದಿನ ತಾನೇ ಬಂದು ಇನ್ನು ಮೇಲೆ ಬಿಡಲಾರೆನೆಂದು ನನ್ನ ಮನಸ್ಸಿನಲ್ಲಿ ಪರಿಪೂರ್ಣವಾಗಿ ಪ್ರವೇಶಿಸಿದನು. ಸಪ್ತಮೇಘ – ಸಪ್ತಸಮುದ್ರ – ಸಪ್ತಪರ್ವತಗಳನ್ನೂ ಸರ್ವ ಲೋಕಗಳನ್ನೂ ಭಕ್ಷಿಸಿದಾಗ್ಯೂ ತೃಪ್ತಿಹೊಂದದೆ ಇರುವ ಉದರವುಳ್ಳ ಆ ಸ್ವಾಮಿಯನ್ನು ನನ್ನಲ್ಲಿ ಅಡಗಿ ಇರುವಂತೆ ನಾನು ಹಿಡಿದು ಆಶ್ರಯಿಸಿ ಅನುಭವಿಸಿದೆನು.

(೩) ಪಿಡಿತ್ತೇನ್ ಪಿಱವಿಕೆಡುತ್ತೇನ್ ಪಿಣಿಶಾರೇನ್,
ಮಡಿತ್ತೇನ್ ಮನೈವಾೞ್ಕ್ಕೈಯುಳ್ ನಿಱ್ಪದೋರ್
ಮಾಯೈಯೈ,
ಕೊಡಿಕ್ಕೋಪುರ ಮಾಡಙ್ಗಳ್ ಶೂೞ್ ತಿರುಪ್ಪೇರಾನ್,
ಅಡಿಚ್ಚೇರ್ವದೆನಕ್ಕೆಳಿದಾಯಿನವಾಱೇ.

ಪ್ರ|| ಕೊಡಿ-ಧ್ವಜಗಳುಳ್ಳ, ಕೋಪುರ-ಗೋಪುರಗಳಿಂದಲೂ, ಮಾಡಙ್ಗಳ್-ಉಪ್ಪರಿಗೆಗಳಿಂದಲೂ, ಶೂೞ್-ಪರಿವೃತವಾದ, ತಿರುಪ್ಪೇರಾನ್-ಶ್ರೀನಾಮಪುರಿಯಲ್ಲಿ ವಾಸವಾಗಿರುವವನ, ಅಡಿ-ಪಾದಗಳನ್ನು, ಶೇರ್ವದು-ಆಶ್ರಯಿಸೋಣವು, ಎನಕ್ಕು-ನನಗೆ, ಎಳಿದು ಆಯಿನ ಅಱು-ಸುಲಭವಾದ ಪ್ರಕಾರವು. ಪಿಡಿತ್ತೇನ್-ನಿರ್ಹೇತುಕವಾಗಿ ಅವನ ಪಾದಗಳನ್ನು ಆಶ್ರಯಿಸಿದೆನು. (ಆದುದರಿಂದ) ಪಿಱವಿ ಕೆಡುತ್ತೇನ್ – ಜನ್ಮಪರಮ್ಪರೆಯನ್ನು ಭೇದಿಸಿದೆನು. ಪಿಣಿ – ದುಃಖಗಳನ್ನು, ಶಾರೇನ್ – ನಾನು ಹೊಂದಲಾರೆನು. ಮನೈವಾೞ್ಕ್ಕೈಯುಳ್ – ಸಂಸಾರದಲ್ಲಿ, ನಿಱ್ಪದು-ನಿಲ್ಲೋಣವೆಂಬ, ಓರ್ಮಾಯೈಯೈ – ಅದ್ವಿತೀಯವಾದ ಅಜ್ಞಾನವನ್ನು, ಮಡಿತ್ತೇನ್-ನಿವಾರಣಮಾಡಿದೆನು.

( ಸ-ಗಾ-ರ || )—

ಶ್ರೀಗೋಪುರೈರ್ಧ್ವಜಯುತೈರಪಿ ಸೌಧವರ್ಗೈ-
ಸ್ಸಮ್ಭೂಷಿತೇ ವಸತಿ ನಾಮಪುರೇ ಮುರಾರಿಃ |
ತತ್ಪಾದಯುಗ್ಮಭಜನಾತ್ಸುಲಭಾದ್ಭವಾಬ್ಧಿಂ
ಸನ್ತೀರ್ಯ ದುಃಖರಹಿತೋಽಸ್ಮಿ ನಿಹತ್ಯ ಮಾಯಾಮ್ ||

ತಾ|| ಧ್ವಜಗಳುಳ್ಳ ಗೋಪುರಗಳಿಂದಲೂ ಉಪ್ಪರಿಗೆಗಳಿಂದಲೂ ಪರಿವೃತವಾದ ಶ್ರೀನಾಮಪುರಿಯಲ್ಲಿ ವಾಸಮಾಡುತ್ತಿರುವವನ ಪಾದಗಳನ್ನು ಆಶ್ರಯಿಸೋಣವು ನನಗೆ ಸುಲಭವಾದ ಉಪಾಯವು. ನಿರ್ಹೇತುಕವಾಗಿ ನಾನು ಅವನ ಪಾದಗಳನ್ನು ಆಶ್ರಯಿಸಿದೆನು. ಮತ್ತು ನನ್ನ ಜನ್ಮಪರಂಪರೆಯನ್ನೂ ಭೇದಿಸಿದೆನು. ಆದುದರಿಂದ ನನಗೆ ಯಾವ ದುಃಖವೂ ಬರಲಾರದು. ಸಂಸಾರದಲ್ಲಿ ನಿಲ್ಲೋಣವೆಂಬ ಅಜ್ಞಾನವನ್ನು ನಾನು ಧ್ವಂಸಮಾಡಿದೆನು.

(೪) ಎಳಿದಾಯಿನವಾಱೆನ್ಱೆನ್ ಕಣ್ಕಳ್ ಕಳಿಪ್ಪ,
ಕಳಿದಾಕಿಯ ಶಿನ್ದೈಯನಾಯ್ ಕ್ಕಳಿಕ್ಕಿನ್ಱೇನ್,
ಕಿಳಿತಾವಿಯ ಶೋಲೈಕಳ್ ಶೂೞ್ ತಿರುಪ್ಪೇರಾನ್,
ತೆಳಿದಾಕಿಯ ಶೇಣ್ವಿಶುಮ್ಬು ತರುವಾನೇ

ಪ್ರ|| ಎನ್ ಕಣ್ಕಳ್-ನನ್ನ ಕಣ್ಣುಗಳು, ಎಳಿದಾಯಿನವಾಱೆನ್ಱು-ಪ್ರಾಪ್ಯವು ಸುಲಭವಾದ ಪ್ರಕಾರವೆಂದು, ಕಳಿಪ್ಪ-ಆನನ್ದಿಸುವಂತೆ, ಕಳಿದಾಕಿಯ-ಆನನ್ದಿಸುವ, ಶಿನ್ದೈಯನಾಯ್-ಮನಸ್ಸುಳ್ಳವನಾಗಿ, ಕಳಿಕ್ಕಿನ್ಱೇನ್ - ಸನ್ತುಷ್ಟನಾಗಿದೇನೆ. ಕಿಳಿ ತಾವಿಯ-ಗಿಣಿಗಳು ಆಶ್ರಯಿಸಿರುವ, ಶೋಲೈಕಳ್ ಶೂೞ್-ಉದ್ಯಾನಗಳಿಂದ ಪರಿವೃತವಾದ, ತಿರುಪ್ಪೇರಾನ್—ಶ್ರೀನಾಮಪುರಿಯಲ್ಲಿ ನಿವಾಸಮಾಡಿರುವವನು, ತೆಳಿದಾಕಿಯ-ಪ್ರಕಾಶವುಳ್ಳ, ಶೇಣ್ವಿಶುಮ್ಬು - ಪರಮಾಕಾಶವನ್ನು, ತರುವಾನೇ-ತರುವನು.

( ಸ-ಗಾ-ರ || )—

ಪ್ರಾಪ್ಯಂ ಹಿ ಭಾತಿ ಸುಲಭಂ ಮಮ ಚೇತಿ ನೇತ್ರ-
ದ್ವನ್ದ್ವಂ ಪ್ರಹರ್ಷಭರಿತಂ ಹೃದಯಂ ಪ್ರಹೃಷ್ಟಮ್ |
ಆನನ್ದವಾನಹಮಿಹಾಸ್ಮಿ ದದಾತಿ ವಿಷ್ಣುಃ
ಶ್ರೀನಾಮಪುರ್ಯಧಿಪತಿಃ ಪರಮಂ ಪದಂ ಮೇ ||

ತಾ|| ನನಗೆ ಪ್ರಾಪ್ಯವು ಸುಲಭವಾಯಿತೆಂದು ನನ್ನ ಕಣ್ಣುಗಳು ಹರ್ಷಭರಿತವಾಗಿ ಆನನ್ದಬಾಷ್ಪಪರಿಪೂರ್ಣವಾದುವು. ನನ್ನ ಮನಸ್ಸೂ ಅತ್ಯನ್ತ ಸನ್ತುಷ್ಟವಾಗಿದೆ. ಗಿಣಿಗಳಿಗೆ ಆಶ್ರಯಸ್ಥಾನವಾದ ಉದ್ಯಾನಗಳಿಂದ ಕೂಡಿದ ಶ್ರೀನಾಮಪುರಿಯಲ್ಲಿ ವಾಸಮಾಡುವ ಸ್ವಾಮಿಯು ದಿವ್ಯತೇಜಃ ಪ್ರಕಾಶವುಳ್ಳ ಪರಮಾಕಾಶವನ್ನು ನನಗೆ ತರುವನು.

(೫) ವಾನೇ ತರುವಾನೆನಕ್ಕಾಯೆನ್ನೋಡೊಟ್ಟಿ,
ಊನೇಯ್ ಕುರಮ್ಬೈಯಿದನುಳ್ ಪುಕುನ್ದು, ಇನ್ಱು
ತಾನೇ ತಡುಮಾಱ್ಱ ವಿನೈಕಳ್ ತವಿರ್ತ್ತಾನ್,
ತೇನೇಯ್ ಪೊೞಿಲ್ ತೆನ್ ತಿರುಪ್ಪೇರ್ನಕರಾನೇ.

ಪ್ರ॥ ತೇನೇಯ್-ದುಂಬಿಗಳಿಂದ ಕೂಡಿದ, ಪೊಳಿಲ್-ಉದ್ಯಾನಗಳುಳ್ಳ, ಶೇ-ರಮ್ಯವಾದ, ತಿರುಪ್ಪೇರ್‌ನಕರಾನೇ- ಶ್ರೀನಾಮಪುರಿಯಲ್ಲಿ ವಾಸಮಾಡುವವನು, ಎನಕ್ಕು-ನನಗೆ, ವಾನೇ ತರುವಾನಾಯ್-ಪರಮಪದವನ್ನು ತರುವುದಾಗಿ ಉದ್ದೇಶಿಸಿ, ಎನ್ನೋಡು ಒಟ್ಟಿ-ನನ್ನೊಡನೆ ಪ್ರತಿಜ್ಞೆಮಾಡಿ, ಊನೇಯ್-ಮಾಂಸಪುಷ್ಟವಾದ, ಕುರಮ್ಬೈ ಇದನುಳ್-ಈ ಶರೀರದಲ್ಲಿ, ಇನ್ರು-ಈಗ, ತಾನೇ ಪುಕುನ್ದು-ತಾನೇ ಪ್ರವೇಶಿಸಿ, ತಡುಮಾಱ-ತನ್ನನ್ನು ಅಗಲಿ ಕ್ಲೇಶಪಡುವುದಕ್ಕೆ ಹೇತುಭೂತವಾದ, ವಿನೈಕಳ್ -- ಪುಣ್ಯಪಾಪ ಕರ್ಮಗಳನ್ನು, ತವಿರ್‌ತ್ತಾ-ನಿವಾರಣಮಾಡಿದನು.

( ಸ-ಗಾ-ರ )—

ಭೃಙ್ಗಾವೃತ್ತೈರಪಿ ವನೈಸ್ಸಹಿತೇ ಚ ರಮ್ಯೇ
ಮೋಕ್ಷಪ್ರದೋ ಜಯತಿ ನಾಮಪುರೇ ಹರಿರ್ಯಃ ।
ಏವಂ ಪ್ರತಿಶ್ರುತಿಯುತೋ ಮಮ ಚರ್ಮದೇಹಂ
ಕ್ಷಿಪ್ರಂ ಪ್ರವಿಶ್ಯ ಹತವಾನ್ಮಮ ಕರ್ಮರಾಶಿಮ್ ॥

ತಾ॥ ದುಂಬಿಗಳಿಂದ ಕೂಡಿದ ಉದ್ಯಾನಗಳುಳ್ಳ ರಮಣೀಯವಾದ ಶ್ರೀನಾಮಪುರಿಯಲ್ಲಿ ವಾಸಮಾಡುವ ಸ್ವಾಮಿಯು ನನಗೆ ಪರಮಪದವನ್ನು ತರಲು ಉದ್ದೇಶಿಸಿ, ನನ್ನೊಡನೆ ಪ್ರತಿಜ್ಞೆಮಾಡಿ, ನನ್ನ ಈ ಮಾಂಸಪುಷ್ಟವಾದ ಶರೀರದಲ್ಲಿ ತಾನೇ ಪ್ರವೇಶಿಸಿ, ನನ್ನ ಪುಣ್ಯಪಾಪರೂಪವಾದ ಕರ್ಮಗಳನ್ನು ನಿವಾರಣಮಾಡಿದನು.

(೭) ತಿರುಪ್ಪೇರ್‌ನಕರಾನ್ ತಿರುಮಾಲಿರುಂಶೋಲೈ,
ಪೊರುಪ್ಪೇ ಯುಱೈಕಿನ್ಱ ಪಿರಾನಿನ್ಱುವನ್ದು,
ಇರುಪ್ಪೇನೆನ್ಱೆನ್ನೆಞ್ಜ ನಿಱೈಯ ಪುಕುನ್ದಾನ್,
ವಿರುಪ್ಪೇ ಪೆಱ್ಱಮುದಮುಣ್ಡು ಕಳಿತ್ತೇನೇ.

ಪ್ರ॥ ತಿರುಪ್ಪೇರ್ ನಕರಾನ್-ಶ್ರೀನಾಮಪುರಿಯ ಅಧಿಪತಿಯು, ತಿರುಮಾಲಿರುಂಶೋಲೈಪೊರುಪ್ಪೇ - ಶ್ರೀವನಗಿರಿಯಲ್ಲೇ, ಉಱೈಕಿನ್ಱ - ನಿತ್ಯವಾಸಮಾಡುವ, ಪಿರಾನ್-ಸ್ವಾಮಿಯು, ಇರುಪ್ಪೇನ್ ಎನ್ಱು-ಇಲ್ಲಿ ಇರುವೆನೆಂದು ಹೇಳಿ, ಎನ್ನೆಞ್ಜ ನಿಱೈಯ-ನನ್ನ ಮನಸ್ಸು ತುಂಬಾ, ಪುಕುನ್ದಾನ್-ಪ್ರವೇಶಿಸಿದನು. ವಿರುಪ್ಪೇ

ಪೆಱ್ಱು-ಅವನ ಬಹುಮಾನವನ್ನೇ ಪಡೆದು, ಇನ್ಱು - ಈದಿನ, ವನ್ದು-ಬಂದು, ಅಮುದಮ್ ಉಣ್ಡು - ಗುಣಾನುಭವರೂಪವಾದ ಅಮೃತವನ್ನು ಪಾನಮಾಡಿ, ಕಳಿತ್ತೇನ್-ಆನನ್ದಿಸಿದೆನು.

( ಸ-ಗಾ-ರ ॥ )—

ಶ್ರೀನಾಮಪುರ್ಯಧಿಪತಿರ್ವನಗಿರ್ಯಧೀಶ-
ಸ್ಸ್ವಾಮೀ ಹೃದೀಹ ನಿವಸಾಮಿ ತವೇತಿ ಪೂರ್ಣಃ ।
ಚಿತ್ತೇ ಪ್ರವಿಶ್ಯ ಮಮ ಗೌರವಮಾತನೋತೀ-
ತ್ಯಾನನ್ದವಾನಹಮಿಹಾಮೃತಪಾನಮತ್ತಃ ॥

ತಾ॥ ಶ್ರೀನಾಮಪುರಿಯ ಅಧಿಪತಿಯಾದ ಸ್ವಾಮಿಯು ಶ್ರೀವನಗಿರಿಯಲ್ಲೇ ನಿತ್ಯವಾಸಮಾಡುವ ಆ ಸ್ವಾಮಿಯೇ ಇಲ್ಲಿ ಇರುವೆನೆಂದು ಹೇಳಿ ನನ್ನ ಮನಸ್ಸಿನಲ್ಲಿ ಪೂರ್ಣವಾಗಿ ಪ್ರವೇಶಿಸಿದನು. ನಾನು ಅವನ ಅನುಗ್ರಹರೂಪವಾದ ಬಹುಮಾನವನ್ನೇ ಪಡೆದು ಈದಿನ ಬಂದು ಅವನ ಗುಣಾನುಭವರೂಪವಾದ ಅಮೃತವನ್ನು ಪಾನಮಾಡಿ ಆನನ್ದಿಸಿದೆನು.

(೭) ಉಣ್ಡುಕಳಿತ್ತೇಱ್ಕುಮ್ಬರೆನ್ ಕುಱ್ಱ, ಮೇಲ್ಮೈ-
ತ್ತೊಣ್ಡು ಕಳಿತ್ತನ್ದಿತ್ತೊೞುಮ್ ಶೊಲ್ಲುಪ್ಪೆಱ್ಱೇನ್,
ವಣ್ಡುಕಳಿಕ್ಕುಮ್ ಪೊೞಿಲ್‌ಶೂೞ್ ತಿರುಪ್ಪೇರಾನ್,
ಕಣ್ಡುಕಳಿಪ್ಪಕ್ಕಣ್ಣುಳ್ ನಿನ್ಱಕಲಾನೇ.

ಪ್ರ॥ ವಣ್ಡುಕಳಿಕ್ಕುಮ್ - ದುಂಬಿಗಳು ಮಧುಪಾನವಂಮಾಡಿ ಸನ್ತುಷ್ಟವಾಗುವ, ಪೊೞಿಲ್‌ಶೂೞ್-ಉದ್ಯಾನಗಳಿಂದ ಪರಿವೃತವಾದ, ತಿರುಪ್ಪೇರಾನ್-ಶ್ರೀನಾಮಪುರಿಯ ಸ್ವಾಮಿಯು, ಕಣ್ಡುಕಳಿಪ್ಪ-ತನ್ನನ್ನು ನೋಡಿ ಸನ್ತುಷ್ಟನಾಗುವಂತೆ, ಕಣ್ಣುಳ್‌ನಿನ್ಱು-ನನ್ನ ಕಣ್ಣಿಗ ಗೋಚರವಾಗಿ ಸ್ಥಿರವಾಗಿನಿಂತು, ಅಕಲಾನ್-ಬಿಡದೆ ನಿಂತಿದಾನೆ. ಉಣ್ಡುಕಳಿತ್ತೇಱ್ಕು-ಹೀಗೆ ನಿತ್ಯಾನುಭವಮಾಡಿ ಆನನ್ದಿಸುವ ನನಗೆ, ಉಮ್ಬರ್-ಪರಮಪದವಾಸಿಗಳ ಅನುಭವದಲ್ಲಿ, ಎನ್‌ಕುಱ್ಱ-ಏನು ಕೊರತೆಯುಂಟಾಗಿದೆ? ಮೇಲ್ಮೈತ್ತೊಣ್ಡು-ಅಧಿಕವಾದ ಕೈಙ್ಕರ್ಯರಸವು, ಉಕಳಿತ್ತು-ಪ್ರಬಲವಾಗಿ ವೃದ್ಧಿಹೊಂದಿ, ಅನ್ದಿ - ಅನ್ತ್ಯಕಾಲದಲ್ಲಿ, ತೊೞುಮ್ ಶೊಲ್ಲು ಪೆಱ್ಱೇನ್-ಕೈಙ್ಕರ್ಯವಾಚಕವಾದ "ನಮಃ"-ಎಂಬ ಶಬ್ದವನ್ನು ಹೇಳುವ ಭಾಗ್ಯವನ್ನು ಪಡೆದೆನು.

( ಸ-ಗಾ-ರ ॥ )—

ಶ್ರೀನಾಮಪುರ್ಯಧಿಪತಿರ್ಮಮ ದರ್ಶನಾರ್ಥಂ
ಪ್ರತ್ಯಕ್ಷ ಏವ ಭವತೀಹ! ನ ಯಾತಿ ದೂರಮ್ ।
ನಿತ್ಯಾನುಭೂತಿಮುದಿತೋಽಸ್ಮಿ! ನ ಹೀಯತೇ ಮೇ
ಕಿಞ್ಚಿಚ್ಚ! ಭೋಗವಿಭವೈರ್ನಮ ಉಕ್ತಿಗೋಽಸ್ಮಿ ॥

ತಾ॥ ದುಂಬಿಗಳು ಮಧುಪಾನವಂಮಾಡಿ ಸನ್ತುಷ್ಟವಾಗುವ ಉದ್ಯಾನಗಳುಳ್ಳ ಶ್ರೀನಾಮಪುರಿಯ ಸ್ವಾಮಿಯು ತನ್ನನ್ನು ನೋಡಿ ನಾನು ಸನ್ತುಷ್ಟನಾಗುವಂತೆ ನನ್ನ ಕಣ್ಣಿಗೆ ಗೋಚರವಾಗಿ ಬಿಡದೆ ಸ್ಥಿರವಾಗಿ ನಿಂತಿದಾನೆ. ಹೀಗೆ ನಿತ್ಯಾನುಭವವಂ ಮಾಡಿ ಆನನ್ದಿಸುವ ನನಗೆ ಪರಮಪದವಾಸಿಗಳ ಅನುಭವದಲ್ಲಿ ಏನಾದರೂ ಕೊರತೆಯುಂಟೋ? ನನಗೆ ಕೈಙ್ಕರ್ಯರಸವು ಪ್ರಬಲವಾಗಿ ವೃದ್ಧಿಹೊಂದಿದುದರಿಂದ ಅನ್ತ್ಯಕಾಲದಲ್ಲಿ ಕೈಙ್ಕರ್ಯವಾಚಕವಾದ ನಮಶ್ಶಬ್ದವನ್ನೇ ಹೇಳುತ್ತಿದೇನೆ.

(೮) ಕಣ್ಣುಳ್ ನಿನ್ರಕಲಾನ್ ಕರುತ್ತಿನ್ ಕಣ್ ಪೆರಿಯನ್,
ಎಣ್ಣಿಲ್ ನುಣ್ಪೊರುಳೇೞಿಶೈಯಿನ್ ಶುವೈತಾನೇ,
ವಣ್ಣ ನನ್ಮಣಿಮಾಡಙ್ಗಳ್‌ಶೂೞ್ ತಿರುಪ್ಪೇರಾನ್,
ತಿಣ್ಣಮೆನ್ ಮನತ್ತು ಪ್ಪುಕುನ್ದಾನ್ ಶೆಱಿನ್ದೇ.

ಪ್ರ॥ ಕಣ್ಣುಳ್‌ನಿನ್ರು-ಕಣ್ಣಿಗೆ ಗೋಚರವಾಗಿ ನಿಂತು, ಅಕಲಾನ್-ಬಿಡದೆ ಇದಾನೆ. ಕರುತ್ತಿನ್‌ಕಣ್-ಇವನ ಉದ್ದೇಶವನ್ನು ನೋಡಿದರೆ, ಪೆರಿಯನ್-ಮಹಾ ಸಙ್ಕಲ್ಪವುಳ್ಳವನಾಗಿದಾನೆ. ಎಣ್ಣಿಲ್-ಚಿನ್ತಿಸಿನೋಡಿದರೆ, ನುಣ್‌ಪೊರುಳ್-ಸೂಕ್ಷ್ಮವಸ್ತುವಾದ, ತಾನೇ-ತಾನೇ, ಏೞ್ ಇಶೈಯಿನ್-ಸಪ್ತಸ್ವರಗಳ, ಶುವೈ-ರಸವುಳ್ಳವನಾಗಿ, ವಣ್ಣ – ನಾನಾವರ್ಣಗಳುಳ್ಳ, ನನ್‌ಮಣಿಮಾಡಙ್ಗಳ್ ಶೂೞ್-ದಿವ್ಯರತ್ನಗಳಿಂದ ನಿರ್ಮಿತವಾದ ಸೌಧಗಳಿಂದ ಪರಿವೃತವಾದ, ತಿರುಪ್ಪೇರಾನ್-ಶ್ರೀನಾಮಪುರಿಗೆ ಅಧಿಪತಿಯಾದವನಾಗಿ, ಎನ್ ಮನತ್ತು – ನನ್ನ ಮನಸ್ಸಿನಲ್ಲಿ, ತಿಣ್ಣಮ್-ನಿರ್ಹೇತುಕವಾಗಿ, ಇನ್ರು-ಈದಿನ, ಶೆಱಿನ್ದು-ದೃಢವಾಗಿ, ಪುಕುನ್ದಾನ್-ಪ್ರವೇಶಿಸಿದನು.

( ಸ–ಗಾ–ರ || )—

ಚಕ್ಷುಃ ಪುರೋಽಸ್ತಿ ಮಮ ! ನೈವ ಹಿ ಯಾತಿ ದೂರಂ !
ಸಙ್ಕಲ್ಪತಃ ಕಿಲ ಮಹಾನಿತಿ ಸೂಕ್ಷ್ಮರೂಪಃ |
ಸಪ್ತಸ್ವರಾದಿರಸವಾರಿಧಿರಾಢ್ಯ–ಸೌಧ–
ಶ್ರೀನಾಮಪುರ್ಯಧಿಪತಿರ್ಹೃದಿ ಮೇ ಪ್ರವಿಷ್ಟಃ ||

ತಾ|| ನನ್ನ ಕಣ್ಣಿಗೆ ಗೋಚರವಾಗಿ ಬಿಡದೆ ನಿಂತಿದಾನೆ. ಇವನ ಉದ್ದೇಶವನ್ನು ನೋಡಿದರೆ ಇವನು ಮಹಾಸಙ್ಕಲ್ಪವುಳ್ಳವನೆಂದು ತೋರುತ್ತದೆ. ನಾವು ಚಿನ್ತಿಸಿ ನೋಡಿದರೆ— ಅತಿ ಸೂಕ್ಷ್ಮವಸ್ತುವಾದ ತಾನೇ ಸಪ್ತಸ್ವರಗಳ ರಸವುಳ್ಳವನಾಗಿ ದಿವ್ಯರತ್ನಮಯಸೌಧ ಪರಿವೃತವಾದ ಶ್ರೀನಾಮಪುರಿಗೆ ಅಧಿಪತಿಯಾಗಿ ನನ್ನ ಮನಸ್ಸಿನಲ್ಲಿ ದೃಢವಾಗಿ ಈದಿನ ಬಂದು ಪ್ರವೇಶಿಸಿದನು.

(೯) ಇನ್ಱೆನ್ನೈ ಪ್ಪೊರುಳಾಕ್ಕಿ ತ್ತನ್ನೈಯೆನ್ನುಳ್ ವೈತ್ತಾನ್,
ಅನ್ಱೆನ್ನೈ ಪ್ಪುಱಮ್ ಪೋಕ ಪ್ಪುಣರ್ತ್ತದೆನ್ ಶೆಯ್‌ವಾನ್,
ಕುನ್ಱೆನ್ನ ತ್ತಿಕಳ್ ಮಾಡಙ್ಗಳ್ ಶೂೞ್ ತಿರುಪ್ಪೇರಾನ್,
ಒನ್ಱೆನಕ್ಕರುಳ್ ಶೆಯ್ಯ ವುಣರ್ತ್ತಲುಱ್ಱೇನೇ.

ಪ್ರ|| ಇನ್ಱು–ಈದಿನ, ಎನ್ನೈಪ್ಪೊರುಳಾಕ್ಕಿ–ನನ್ನನ್ನು ಒಂದು ವಸ್ತುವನ್ನಾಗಿ ಮಾಡಿ, ತನ್ನೈ–ತನ್ನನ್ನು, ಎನ್ನುಳ್ – ನನ್ನ ಮನಸ್ಸಿನಲ್ಲಿ, ವೈತ್ತಾನ್–ಇಟ್ಟನು. ಅನ್ಱು–ಆದಿನ, ಎನ್ನೈ–ನನ್ನನ್ನು, ಪುಱಮ್ ಪೋಕ–ಬೇರೆ ವಿಷಯಗಳಲ್ಲಿ ಮನಸ್ಸಿಡುವಂತೆ ಮಾಡಿ, ಪುಣರ್ತ್ತದು–ಸಙ್ಕಲ್ಪಿಸಿದುದು, ಎನ್ ಶೆಯ್‌ವಾನ್–ಏನುಮಾಡುವುದಕ್ಕಾಗಿ? ಕುನ್ಱು ಎನ್ನ–ಪರ್ವತಗಳೋ ಎಂಬಂತೆ, ತಿಕೞ್–ಪ್ರಕಾಶಿಸುವ, ಮಾಡಙ್ಗಳ್ ಶೂೞ್–ಉಪ್ಪರಿಗೆಗಳಿಂದ ಭರಿತವಾದ, ತಿರುಪ್ಪೇರಾನ್–ಶ್ರೀನಾಮಪುರಿಗೆ ಅಧಿಪತಿಯಾದವನು, ಒನ್ಱು–ಈ ಎರಡರಲ್ಲಿ ಒಂದಕ್ಕೆ ಕಾರಣವನ್ನು, ಎನಕ್ಕು ಅರುಳ್ ಶೆಯ್ಯ–ನನಗೆ ಹೇಳುವುದಕ್ಕಾಗಿ, ಉಣರ್ತ್ತಲುಱ್ಱೇನೇ–ತನ್ನ ಮನಸ್ಸಿನಲ್ಲಿ ನಿಶ್ಚಯಿಸುವಂತೆ ತಿಳಿಸಲು ಉದ್ದೇಶಿಸಿ ಇರುತ್ತೇನೆ.

( ಸ-ಗಾ-ರ || )—

ಅದ್ಯ ಸ್ವಯಂ ಸಪದಿ ಮಾಮಪಿ ವಸ್ತು ಕೃತ್ವಾ
ಸ್ವಾತ್ಮಾನಮೇವ ಮಯಿ ಭಾತಿ ಚ ಸನ್ನಿವೇಶ್ಯ |
ಪೂರ್ವಂ ಕಥಂ ತ್ಯಜತಿ ಹಿ ಸ್ಮ ಪರಾಙ್ಮುಗಂ ಮಾಂ ?
ಪ್ರಷ್ಟುಂ ಹಿ ನಾಮಪುರನಾಯಕಮುದ್ಯತೋಽಸ್ಮಿ ||

ತಾ|| ಈದಿನ ನನ್ನನ್ನು ಒಂದು ವಸ್ತುವನ್ನಾಗಿಮಾಡಿ ನನ್ನ ಮನಸ್ಸಿನಲ್ಲಿ ತನ್ನನ್ನು ಇಟ್ಟನು. ಆದಿನ ನನ್ನನ್ನು ಬೇರೆ ವಿಷಯಗಳಲ್ಲಿ ಮನಸ್ಸಿಡದಂತೆ ಮಾಡಿ ಅವನು ನನ್ನನ್ನು ಅನುಗ್ರಹಿಸಿರುವುದು ಏನುಮಾಡುವುದಕ್ಕಾಗಿ ? ಪರ್ವತಸದೃಶವಾದ ಸೌಧಗಳಿಂದ ಭರಿತವಾದ ಶ್ರೀನಾಮಪುರಿಗೆ ಅಧಿಪತಿಯಾದವನು ನನಗೆ ಇದರ ಕಾರಣವನ್ನು ಹೇಳಲಿ—ಎಂದು ನಾನು ಅವನಿಗೆ ತಿಳಿಸಲು ಉದ್ದೇಶಿಸಿ ಇರುತ್ತೇನೆ.

(೧೦) ಉಕ್ಱ್ಱೆನುಕನ್ನು ಪಣಿಶೆಯ್'ದುನಪಾದಮ್
ಪೆಱ್ಱೆ. ಈದೇಯಿನ್ನಮ್ ವೇಣ್ಡುವದೆನ್ದಾಯ್,
ಕಱ್ಱಾರ್ ಮತ್ತ್ಯವಾಣರ್ ಕಳ್'ವಾೞ್ ತಿರುಪ್ಪೇರಾಱ್ಕು,
ಅಱ್ಱಾರಡಿಯಾರ್ ತಮಕ್ಕಲ್ಲಲ್ ನಿಲ್ಲಾವೇ.

ಪ್ರ|| ಉಱ್ಱೇ - ನಿನ್ನ ಪಾದಗಳನ್ನು ಹೊಂದಿದೆನು. (ಆದುದರಿಂದ) ಉಕನ್ನು-ಆಶಿಪಟ್ಟು, ಪಣಿಶೆಯ್'ದು-ವಾಚಿಕ ಕೈಙ್ಕರ್ಯವನ್ನು ಮಾಡಿ, ಉನಪಾದಮ್ ಪೆಱ್ಱೇ-ನಿನ್ನ ಪಾದಗಳನ್ನು ಆಶ್ರಯಿಸಿದೆನು. ಎನ್ದಾಯ್ - ನಿರುಪಾಧಿಕಬನ್ಧುವಾದವನೇ, ಈದೇ-ಈ ಕೈಙ್ಕರ್ಯವೇ, ಇನ್ನಮ್ ವೇಣ್ಡುವದು-ಇನ್ನೂ ಬೇಕಾಗಿರುವುದು. ಕಱ್ಱಾರ್-ವೇದಾಭ್ಯಾಸಮಾಡಿ ತಿಳಿದವರಾದ (ಶಿಕ್ಷೆಪಡೆದವರಾದ), ಮತ್ತ್ಯವಾಣರ್ ಕಳ್-ವೈದಿಕಬ್ರಾಹ್ಮಣರು, ವಾೞ್-ಬಾಳುವ, ತಿರುಪ್ಪೇರಾಱ್ಕು-ಶ್ರೀನಾಮಪುರಿಗೆ ಅಧಿಪತಿಯಾದ ನಿನಗೆ, ಅಱ್ಱಾರ್-ಅನನ್ಯಾಶ್ರಯರಾದ ಕೈಙ್ಕರ್ಯನಿಷ್ಠರಾದ, ಅಡಿಯಾರ್ ತಮಕ್ಕು-ದಾಸಭೂತರಿಗೆ, ಅಲ್ಲಲ್-ದುಃಖಗಳು, ನಿಲ್ಲಾ-ಇರಲಾರವು (ಸಂಭವಿಸಲಾರವು).

( ಸ-ಗಾ-ರ || )—

ತ್ವಾಂ ಸಂಶ್ರಿತೋಽಸ್ಮಿ! ತವ ಪಾದಯುಗಂ ಶ್ರಿತೋಽಸ್ಮಿ
ತ್ವದ್ದಾಸ್ಯತೋ ಮಮ ವಿಭೋ! ತದಿದಂ ಹಿ ಕಾಂಕ್ಷೇ |
ಶ್ರೀವೈದಿಕಾಶ್ರಯಭುವೀಹ ತು ನಾಮಪುರ್ಯಾಂ
ಭಾಸಿ! ತ್ವದಂಘ್ರಿವಿನತೇಷು ನ ದುಃಖಸಙ್ಗಃ ||

ತಾ॥ ನಿನ್ನ ಪಾದಗಳನ್ನೇ ಹೊಂದಿದೆನು. ಆದುದರಿಂದ ಆಶೆಪಟ್ಟು ವಾಚಿಕ ಕೈಙ್ಕರ್ಯವನ್ನು ಮಾಡಿ ನಿನ್ನ ಪಾದಗಳನ್ನು ಆಶ್ರಯಿಸಿದೆನು. ನಿರುಪಾಧಿಕ ಬನ್ಧುವಾದ ಸ್ವಾಮಿಯೇ! ಈ ಕೈಙ್ಕರ್ಯವೇ ನನಗೆ ಬೇಕಾಗಿರುವುದು. ವೇದಾಭ್ಯಾಸ ನಿಷ್ಣಾತರಾದ ವೈದಿಕ ಬ್ರಾಹ್ಮಣರು ವಾಸಮಾಡುವ ಶ್ರೀನಾಮಪುರಿಗೆ ಅಧಿಪತಿಯಾದ ನಿನಗೆ ನಿತ್ಯಕೈಙ್ಕರ್ಯನಿಷ್ಠರಾದ ದಾಸಭೂತರಿಗೆ ಯಾವ ದುಃಖವೂ ಸಂಭವಿಸಲಾರದಷ್ಟೆ!

(೧೧) ನಿಲ್ಲಾವಲ್ಲಲ್ ನೀಳ್‌ವಯಲ್‌ಶೂೞ್ ತಿರುಪ್ಪೇರ್‌ಮೇಲ್,
ನಲ್ಲಾರ್ ಪಲರ್‌ವಾೞ್ ಕುರುಕೂರ್ ಚ್ಚಡಕೋಪನ್,
ಶೊಲ್ಲಾರ್ ತಮಿೞಾಯಿರತ್ತುಳ್ಳಿವೈಪತ್ತುಮ್
ವಲ್ಲಾರ್, ತೊಣ್ಡರಾಳ್ವದು ಶೂೞ್‌ಪೊನ್ ವಿಶುಮ್ಬೇ.

ಪ್ರ॥ ಅಲ್ಲಲ್‌ನಿಲ್ಲಾ–ದುಃಖಗಳಿಲ್ಲದ, ನೀಳ್‌ವಯಲ್‌ಶೂೞ್-ವಿಶಾಲವಾದ ಕ್ಷೇತ್ರಗಳಿಂದ ಪರಿವೃತವಾದ, ತಿರುಪ್ಪೇರ್‌ಮೇಲ್-ಶ್ರೀನಾಮಪುರಿಯ ವಿಷಯದಲ್ಲಿ, ನಲ್ಲಾರ್–ವಿಲಕ್ಷಣರಾದವರು, ಪಲರ್--ಅನೇಕರು, ವಾೞ್-ಬಾಳುವ, ಕುರುಕೂರ್ ಶಡಕೋಪನ್-ಶ್ರೀ ಕುರುಕಾಪುರಿಗೆ ನಿರ್ವಾಹಕರಾದ ಶಠಾರಿಮುನಿವರ್ಯರ, ಶೊಲ್ ಆರ್ ತಮಿೞ್ – ದಿವ್ಯಸೂಕ್ತಿಗಳಿಂದ ಕೂಡಿದ ದ್ರಾವಿಡಪದ್ಯಾತ್ಮಕವಾದ, ಆಯಿರತ್ತುಳ್–ಸಹಸ್ರ ಪದ್ಯಮಾಲೆಯೊಳು, ಇವೈಪತ್ತುಮ್ – ಈ ದಶಕವನ್ನು, ವಲ್ಲಾರ್–ಬಲ್ಲವರಾದ, ತೊಣ್ಡರ್–ಭಕ್ತರು, ಆಳ್ವದು ಆಳುವಸ್ಥಾನವು, ಶೂೞ್–ಸರ್ವತ್ರ ವ್ಯಾಪ್ತವಾದ, ಪೊನ್–ರಮಣೀಯವಾದ, ವಿಶುಮ್ಬೇ–ಪರಮಪದವೇ.

( ಸಂ–ಗಾ–ರ ॥ )—

ಕ್ಷೇತ್ರೈರ್ವಿಶಾಲೈಃ ಸಸ್ಯಭರಿತೈಃ ಪರಿತಃ ಪರೀತಂ
ನಿರ್ದುಃಖಮೇವ ಶುಭನಾಮಪುರಂ ಪ್ರತೀದಮ್ ।
ಸಾಹಸ್ರಕೇ ವ್ಯರಚಯದ್ದಶಕಂ ಶಠಾರಿ–
ರ್ಭಕ್ತಾಃ ಪಠನ್ತಿ ಯದಿ ಶಾಸತಿ ಧಾಮ ದಿವ್ಯಮ್ ॥

ತಾ॥ ದುಃಖರಹಿತವಾದ ವಿಶಾಲವಾದ ಕ್ಷೇತ್ರಗಳಿಂದ ಪರಿವೃತವಾದ ಶ್ರೀನಾಮಪುರಿಯ ವಿಷಯದಲ್ಲಿ ಶ್ರೀ ಕುರುಕಾಪುರಿಯ ಶಠಾರಿಮುನಿಯು ರಚಿಸಿ ಇರುವ ದ್ರಾವಿಡ ದಿವ್ಯಪ್ರಬನ್ಧರೂಪವಾದ ಸಹಸ್ರ ಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರಾದ ಭಕ್ತರು ದಿವ್ಯತಮವಾದ ಸಾಕ್ಷಾತ್ಪರಮಪದವನ್ನೇ ಆಳುವರು.

( ದ್ರ-ಉ-ಸಂ || )—

ವ್ಯಾಮೋಹಮಾತ್ಮನಿ ವಿಲೋಕ್ಯ ವಿಭೋರವೇಲ-
ಮತ್ಯಾದರೇ ಮಯಿ ಕಥಂ ತ್ವಮನಾದರಃ ಪ್ರಾಕ್ |
ಹೇತುಂ ವದೋಚಿತಮಿಹೇತ್ಯನುಪೃಚ್ಛ್ಯ ಚೈನಂ
ದತ್ತೋತ್ತರೋ ಮುನಿರನೇನ ನ ಚಾಷ್ಟಮೋಽಭೂತ್ ||

( ದ್ರ-ಉ-ತಾ-ರ || )—

ಲಕ್ಷ್ಮೀಕಾನ್ತತ್ವಯೋಗಾದ್ವಿಪದಿ ಸಖಿತಯಾ ದಿವ್ಯದೇಶಸ್ಥಿತತ್ವಾತ್
ಮೋಕ್ಷೋದ್ಯೋಗಾತ್ತದರ್ಥಂ ಕೃತಶಪಥಯಾ ಸರ್ವತಸ್ಸನ್ನಿಧಾನಾತ್ |
ದೃಷ್ಟ್ಯನ್ತಸ್ಸನ್ನಿವಾಸಾದತಿವಿತರಣತಃ ಸ್ವಸ್ವಭಾವಪ್ರಕಾಶಾತ್
ಸ್ವಾಮಿತ್ವಾತ್ತುಷ್ಯತೀತ್ಥಂ ಸ್ತುಯಮನುಪಧಿತಃ ಶ್ರೀಶಠಶತ್ರುರ್ಜಗಾಯ ||

(ಈ ಅಷ್ಟಮದಶಕದ ಸಾರಾಂಶ—)

ಈ ಎಂಟನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವಂತನಿಗೆ ಭಕ್ತರ ವಿಷಯದಲ್ಲಿ ಉಂಟಾಗುವ ಪೂರ್ಣಾನುಗ್ರಹಪ್ರಕಾರವನ್ನು ವರ್ಣಿಸಲು ಉದ್ದೇಶಿಸಿ, ತೇ ತಿರುಪ್ಪೇರೆಂಬ ಶ್ರೀನಾಮಪುರೀ ದಿವ್ಯದೇಶಕ್ಕೆ ಅಧಿಪತಿಯಾದ ಸ್ವಾಮಿಯ ವೈಭವವನ್ನೇ ಶ್ಲಾಘಿಸುತ್ತ, ಆ ಸ್ವಾಮಿಯ ಪಾದಗಳನ್ನೇ ಆಶ್ರಯಿಸಿ ನಿತ್ಯಕೈಙ್ಕರ್ಯ ನಿಷ್ಠರಾಗಿ ಉಜ್ಜೀವಿಸಿ, ಅವನ ಅನುಗ್ರಹದಿಂದ ದಿವ್ಯತೇಜಸ್ಸುಳ್ಳ ರಮಣೀಯ ತಮವಾದ ಪರಮಪದವನ್ನು ಹೊಂದಿ ದುಃಖರಹಿತರಾಗಿ ನಿರತಿಶಯಾನನ್ದವನ್ನು ಪಡೆಯಬೇಕೆಂದು ತಮ್ಮ ದೃಢಸಙ್ಕಲ್ಪವನ್ನು ವಿವರಿಸಿ ಇರುತ್ತಾರೆ.

ಶ್ರೀಃ

# ದಶಮಶತಕದಲ್ಲಿ—ನವಮದಶಕ.

(ಶೂೞ್ವಿಶುಮ್ಬು—)

(ಈ ದಶಕದಲ್ಲಿ—ಪರಮಪದವನ್ನು ಹೊಂದಲು ಮುಕ್ತರಿಗೆ ಉಂಟಾಗುವ ಅರ್ಚಿರಾದಿ ಮಾರ್ಗದ ಪ್ರಯಾಣದಲ್ಲಿ ಅತಿಥಿಸತ್ಕಾರಗಳ ಕ್ರಮಗಳು ವರ್ಣಿಸಲ್ಪಡುತ್ತವೆ.)

(೧) ಶೂೞ್ವಿಶುಮ್ಬಣಿಮುಕಿಲ್ ತೂರಿಯಮ್ ಮುೞಕ್ಕಿನ,
ಆೞ್ಕಡಲಲೈತಿರೈ ಕ್ಕೈಯೆಡುತ್ತಾಡಿನ,
ಏೞ್ಪೊೞಿಲುಮ್ ವಳಮೇನ್ದಿಯ ಎನ್ನಪ್ಪನ್,
ವಾೞ್ಪುಕೞ್ ನಾರಣನ್ ತಮರೈ ಕ್ಕಣ್ಡುಕನ್ದೇ

ಪ್ರ॥ ಎನ್ ಅಪ್ಪನ್—ನನ್ನ ಸ್ವಾಮಿಯಾದ, ವಾೞ್ಪುಕೞ್—ಆಶ್ರಿತರನ್ನು ಬಾಳುವಂತೆ ಮಾಡುವ ಕಲ್ಯಾಣಗುಣಗಳುಳ್ಳ, ನಾರಣನ್ ತಮರೈ – ನಾರಾಯಣನ ಭಕ್ತರನ್ನು, ಕಣ್ಡು ಉಕನ್ದೇ – ನೋಡಿ ಸನ್ತೋಷಪಟ್ಟು, ಶೂೞ್ವಿಶುಮ್ಬು – ಸರ್ವತೋವ್ಯಾಪಿಯಾದ ಆಕಾಶದಲ್ಲಿ, ಅಣಿಮುಕಿಲ್—ಅಲಙ್ಕಾರವಾಗಿ ಸಾಲು ಸಾಲಾಗಿರುವ ಮೇಘಗಳು, ತೂರಿಯಮ್ ಮುೞಕ್ಕಿನ – ವಾದ್ಯಘೋಷಗಳನ್ನು ಮಾಡಿದುವು. ಆೞ್ಕಡಲ್ – ಅಗಾಧವಾದ ಸಮುದ್ರಗಳು, ಅಲೈತಿರೈ—ಚಲಿಸುತ್ತಿರುವ ಅಲೆಗಳನ್ನು, ಕೈ ಎಡುತ್ತು ಆಡಿನ—ಮೇಲಕ್ಕೆ ಕೈಗಳಂತೆ ಎತ್ತಿ ಆಡಿದುವು. ಏೞ್ಪೊೞಿಲುಮ್—ಸಪ್ತದ್ವೀಪಗಳೂ, ವಳಮ್ ಏನ್ದಿಯ—ಒಳ್ಳೇ ವಸ್ತುಗಳನ್ನು ಧರಿಸಿ ಇದ್ದುವು.

(ಸ—ಗಾ—ರ ॥)—

ನಾರಾಯಣಸ್ಯ ಜಗತಾಂ ಪರಿಪಾಲಕಸ್ಯ
ಭಕ್ತಾನ್ಸಮಸ್ತ ಪ್ರಭುವರಸ್ಯ ವಿಲೋಕ್ಯ ಮೇಘಾಃ ।
ಗರ್ಜನ್ತಿ ತೂರ್ಯನಿನದೈಃ! ಸ್ವಕರೈಸ್ತರಙ್ಗೈಃ
ನೃತ್ಯನ್ತಿ ಚಾಬ್ಧಯ ಉದೇತಿ ಚ ಸಪ್ತಲೋಕೀ ॥

ತಾ|| (ಮುಕ್ತಿಮಾರ್ಗದಲ್ಲಿ) ನನ್ನ ಸ್ವಾಮಿಯಾದ ಕಲ್ಯಾಣಗುಣಭರಿತನಾದ ನಾರಾಯಣನ ಭಕ್ತರನ್ನು ಕಂಡು ಆಕಾಶದಲ್ಲಿ ಅಲಂಕಾರವಾಗಿ ಸಾಲು ಸಾಲಾಗಿರುವ ಮೇಘಗಳು ಸನ್ತೋಷದಿಂದ ಗರ್ಜಿಸಿ ವಾದ್ಯಘೋಷಗಳನ್ನು ಮಾಡಿದುವು. ಅಗಾಧವಾದ ಸಮುದ್ರಗಳು ಅಲೆಗಳೆಂಬ ಕೈಗಳನ್ನು ಮೇಲಕ್ಕೆ ಎತ್ತಿ ಆಡಿದುವು. ಸಪ್ತದ್ವೀಪಗಳೂ ಒಳ್ಳೇ ವಸ್ತುಗಳನ್ನು ಧರಿಸಿ ಇದ್ದುವು. (ಈ ಪ್ರಕಾರ ಎಲ್ಲಾ ಕಡೆಗಳಲ್ಲೂ ಭಕ್ತರಿಗೆ ಆಹ್ವಾನವೂ ಅಭಿನನ್ದನವೂ ನಡೆದುವು)

(೨) ನಾರಣನ್ ತಮರೈಕ್ ಕಣ್ಡುಕನ್ದು ನನ್ನೀರ್‌ಮುಕಿಲ್,
ಪೂರಣಪೊಱ್ಕುಡಮ್ ಪೂರಿತ್ತದುಯರ್‌ವಿಣ್ಣಿಲ್,
ನೀರಣಿಕಡಲ್‌ಕಳ್ ನಿನ್ಱಾರ್‌ತ್ತನ, ನೆಡುವರೈ
ತೋರಣಮ್ ನಿರೈತ್ತೆಙ್ಗುಮ್ ತೊೞುದನರುಲಕೇ.

ಪ್ರ|| ನಾರಣನ್ ತಮರೈಕ್ಕಣ್ಡು-ನಾರಾಯಣನ ಭಕ್ತರನ್ನು ಕಂಡು, ಉಕನ್ದು-ಸನ್ತುಷ್ಟವಾಗಿ, ನಲ್‌ನೀರ್‌ಮುಕಿಲ್ – ಶುದ್ಧವಾದ ಉದಕವುಳ್ಳ ಮೇಘವು, ಉಯರ್-ಉನ್ನತವಾದ, ವಿಣ್ಣಿಲ್ – ಆಕಾಶದಲ್ಲಿ, ಪೂರಣ ಪೊಱ್ಕುಡಮ್ – ಪೂರ್ಣವಾದ ಸುವರ್ಣಘಟಗಳನ್ನು, ಪೂರಿತ್ತದು ತುಂಬಿದುವು. ನೀರ್ ಅಣಿ-ನೀರನ್ನು ತುಂಬಿಕೊಂಡಿರುವ, ಕಡಲ್‌ಕಳ್ – ಸಮುದ್ರಗಳು, ನಿನ್ಱು ಆರ್‌ತ್ತನ-ನಿಂತು ಘೋಷಿಸಿದುವು. ನೆಡುವರೈ–ಉನ್ನತವಾದ ಪರ್ವತಗಳನ್ನು, ತೋರಣಮ್ ನಿರೈತ್ತು–ತೋರಣಗಳನ್ನಾಗಿ ಸಾಲಾಗಿ ನೆಟ್ಟು, ಉಲಕು–ಆಯಾ ಲೋಕಗಳಲ್ಲಿರುವವರು, ಎಙ್ಗುಮ್–ಎಲ್ಲೆಲ್ಲಿಯೂ ಸೇವೆಮಾಡಿದರು.

( ಸ-ಗಾ-ರ || )

ಭಕ್ತಾನ್ ವಿಲೋಕ್ಯ ಸಜಲೋ ಜಲದಃ ಪ್ರಹೃಷ್ಟೋ
ನಾರಾಯಣಸ್ಯ ಗಗನೇ ನನು ಪೂರ್ಣಕುಮ್ಭೈಃ |
ಸೌವರ್ಣಕೈರ್ಲಸತಿ! ಗರ್ಜತಿ ಚಾಬ್ಧಿಮಾಲಾ!
ಲೋಕಾ ಭಜನ್ತಿ ಗಿರಿಭಿರ್ದಿವಿ ತೋರಣೈಸ್ತಾನ್ ||

ತಾ|| ನಾರಾಯಣನ ಭಕ್ತರನ್ನು ಕಂಡು ಸನ್ತುಷ್ಟವಾಗಿ ಶುದ್ಧೋದಕಭರಿತವಾದ ಮೇಘವು ಆಕಾಶದಲ್ಲಿ ಪೂರ್ಣಕುಮ್ಭಗಳನ್ನು ತುಂಬಿ ಅಭಿನನ್ದಿಸಿದುವು. ಜಲಭರಿತವಾದ ಸಮುದ್ರಗಳು ನಿಂತು ಘೋಷಿಸಿದುವು. ಆಯಾ ಲೋಕಗಳಲ್ಲಿರುವವರು ಉನ್ನತವಾದ ಪರ್ವತಗಳನ್ನು ತೋರಣಗಳನ್ನಾಗಿ ನೆಟ್ಟು ಎಲ್ಲೆಲ್ಲಿಯೂ ಉಪಚರಿಸಿ ಸೇವೆಮಾಡಿದರು.

(೩) ತೊೞುದನರುಲಕರ್ಕಳ್ ತೂಪನನ್ಮಲರ್ಮೞೈ
ಪೊೞಿವನರ್, ಪೂಮಿಯನ್ಱಳನ್ದವನ್ ತಮರ್ಮುನ್ನೇ,
ಎೞುಮಿನೆನ್ಱಿರುಮರುಙ್ಗಿಸೈನ್ದನರ್ ಮುನಿವರ್ಕಳ್,
ವೞಿಯಿದು ವೈಕುನ್ದತ್ತುಕ್ಕೆನ್ಱು ವನ್ದೆದಿರೇ.

ಪ್ರ॥ ಅನ್ಱು – ಆ ಪೂರ್ವಕಾಲದಲ್ಲಿ, ಪೂಮಿ ಅಳನ್ದವನ್ – ಭೂಮಿಯನ್ನು ಅಳೆದುಕೊಂಡವನ, ತಮರ್ಮುನ್ನೇ – ಭಕ್ತರಮುಂದೆ, ತೂಪ-ಧೂಪದೊಡನೆ, ನನ್ಮಲರ್ಮೞೈ – ಶ್ಲಾಘ್ಯವಾದ ಪುಷ್ಪವರ್ಷವನ್ನು, ಪೊೞಿವನರ್-ಸುರಿಯುವವರಾಗಿ, ಉಲಕರ್ಕಳ್–ಸಕಲಲೋಕವಾಸಿಗಳೂ, ತೊೞುದನರ್–ಅಂಜಲಿಮಾಡಿದರು. ಮುನಿವರ್ಕಳ್–ಮನನಶೀಲರಾದ ಮುನಿಗಳೂ ಕೂಡ (ತಮ್ಮ ಮೌನವಂ ಬಿಟ್ಟು), ವೈಕುನ್ದತ್ತುಕ್ಕು – ಪರಮಪದಕ್ಕೆ ಹೋಗುವವರಿಗೆ, ವೞಿ ಇದು ಎನ್ಱು – ದಾರಿಯು ಇದು ಎಂದೂ, ಎೞುಮಿನ್ ಎನ್ಱು – ದಯಮಾಡಿರಿ ಎಂದೂ, ಎದಿರೇ ವನ್ದು – ಎದುರಿಗೆ ಬಂದು, ಇರುಮರುಙ್ಗು – ಎರಡು ಪಾರ್ಶ್ವಗಳಲ್ಲೂ ನಿಂತು, ಇಸೈನ್ದನರ್–ವಿನಯಪೂರ್ವಕವಾಗಿ ವಿಜ್ಞಾಪಿಸಿದರು.

( ಸ–ಗಾ–ರ ॥ )—

ವಿಕ್ರಾನ್ತಭೂಮಿವಲಯಸ್ಯ ಹರೇಸ್ತು ಭಕ್ತಾನ್
ಧೂಪೈಶ್ಚ ಪುಷ್ಪನಿಚಯೈಃ ಪರಿತೋಽರ್ಚಯನ್ತಃ ।
ಲೋಕಾ ಉಪರ್ಯಥ ಪರಂ ಪದಮೇವ ಗನ್ತುಂ
ಮಾರ್ಗೋಽಯಮಿತ್ಯಪಿ ಮುದಾ ಮುನಯೋಽಪಿ ಚಾಹುಃ ॥

ತಾ॥ ಆ ತ್ರಿವಿಕ್ರಮಾವತಾರದ ಸ್ವಾಮಿಯ ಭಕ್ತರಮುಂದೆ ಸಕಲಲೋಕವಾಸಿಗಳೂ ಬಂದುನಿಂತು ಧೂಪ ಪುಷ್ಪಾದಿಗಳಿಂದ ಆರಾಧಿಸಿ ಅಂಜಲಿಮಾಡಿದರು. ಮನನಶೀಲರಾದ ಮುನಿಗಳೂ ಕೂಡ ಮೌನವಂಬಿಟ್ಟು— "ಪರಮಪದಕ್ಕೆ ಹೋಗುವವರಿಗೆ ದಾರಿಯು ಇದು" ಎಂದೂ, "ಇಲ್ಲಿ ಹೀಗೆ ದಯಮಾಡಿರಿ" ಎಂದೂ, ಎದುರಿಗೆ ಬಂದು ಎರಡು ಪಾರ್ಶ್ವಗಳಲ್ಲೂ ನಿಂತು ವಿನಯದಿಂದ ವಿಜ್ಞಾಪಿಸಿದರು.

(೪) ಎದಿರೆದಿರಿಮೈಯವರಿರುಪ್ಪಿಡಮ್ ವಕುತ್ತನರ್,
ಕದಿರವರವರವರ್ ಕೈನ್ನಿರೈ ಕಾಟ್ಟಿನರ್,
ಅದಿರ್ಕುರಲ್ ಮುರಶಙ್ಗಳಲೈಕಡಲ್ ಮುೞಕ್ಕೊತ್ತ,
ಮದುವಿರಿ ತುೞಾಯ್ಮುಡಿ ಮಾದವನ್ ತಮರ್ಕ್ಕೇ.

ಪ್ರ॥ ಮದುವಿರಿ-ಮಧುಭರಿತವಾದ, ತುೞಾಯ್ – ತುಳಸೀಮಾಲೆಯೊಡನೆ ಕೂಡಿದ, ಮುಡಿ-ಶಿರಸ್ಸುಳ್ಳ, ಮಾದವರ್ಕ್ಕೆ-ಶ್ರಿಯಃಪತಿಯು, ತಮರ್ಕ್ಕೇ-ಭಕ್ತರಿಗೆ, ಇಮೈಯವರ್-ದೇವತೆಗಳು, ಎದಿರೆದಿರ್ - ಮುಂದೆ ಮುಂದೆ, ಇರುಪ್ಪಿಡಮ್–ವಾಸಸ್ಥಾನಗಳನ್ನು, ವಕುತ್ತನರ್-ಏರ್ಪಡಿಸಿದರು; ಕದಿರವರ್-ದ್ವಾದಶಾದಿತ್ಯರು, ಅವರವರ್–ತಮ್ಮ ತಮ್ಮ, ಕೈನಿರೈ ಕಾಟ್ಟಿನರ್–ಕಿರಣಗಳೆಂಬ ಕೈಗಳಿಂದ ಆದರದೊಡನೆ ಸತ್ಕರಿಸಿದರು. ಮುರಶಙ್ಗಳ್–ಭೇರಿಗಳು, ಅದಿರ್ಕುರಲ್–ಪ್ರತಿಧ್ವನಿಯುಳ್ಳ ಘೋಷಗಳೊಡನೆ, ಅಲೈಕಡಲ್ - ಚಲಿಸುತ್ತಲಿರುವ ಸಮುದ್ರಗಳ, ಮುೞಕ್ಕು ಒತ್ತ-ಘೋಷಗಳಿಗೆ ಸಮಾನವಾಗಿ ಶಬ್ದಿಸಿದುವು.

( ಸ–ಗಾ–ರ ॥ )—

ಶ್ರೀಮಾಧವಸ್ಯ ತುಳಸೀರುಚಿರಾಢ್ಯಮೌಳೇ-
ರ್ಭಕ್ತಾನ್ಮುದಾಽಪ್ಯನಿಮಿಷಾಸ್ಸ್ಥಲತೋಽರ್ಚಯನ್ತಃ ।
ತೇ ದ್ವಾದಶಾಪಿ ರವಯಃ ಕಿರಣೈಃ ಕರೈಸ್ಸ್ವೈ-
ರ್ಭೇರೀನಿನಾದ ಉದಭೂಜ್ಜಲಧೇಶ್ಚ ಘೋಷೈಃ ॥

ತಾ॥ ಮಧುಭರಿತವಾದ ತುಲಸೀಮಾಲೆಯೊಡನೆ ಕೂಡಿದ ಶಿರಸ್ಸುಳ್ಳ ಶ್ರಿಯಃಪತಿಯ ಭಕ್ತರಿಗೆ ದೇವತೆಗಳು ಮುಂದೆ ನಡೆದು ವಾಸಸ್ಥಾನಗಳನ್ನು ಏರ್ಪಡಿಸಿದರು. ದ್ವಾದಶಾದಿತ್ಯರು ತಮ್ಮ ಕಿರಣಗಳೆಂಬ ಕೈಗಳಿಂದ ಆದರದೊಡನೆ ಸತ್ಕರಿಸಿದರು. ಭೇರಿಗಳು ಪ್ರತಿಧ್ವನಿಯುಳ್ಳ ಘೋಷಗಳೊಡನೆ ಸಮುದ್ರ ಘೋಷಗಳಂತೆ ಶಬ್ದಮಾಡಿದುವು.

(೫) ಮಾದವನ್ ತಮರೆನ್ಱು ವಾಶಲಿಲ್ ವಾನವರ್,
ಪೋದುಮಿನೆಮದಿಡಮ್ ಪುಕುದುಕ ವೆನ್ಱಲುಮ್,
ಕೀದಙ್ಗಳ್ ಪಾಡಿನರ್ ಕಿನ್ನರರ್ ಕರುಡರ್ಕಳ್,
ವೇದನಲ್ವಾಯವರ್ ವೇಳ್ವಿಯುಳ್ ಮಡುತ್ತೇ.

ಪ್ರ॥ ವಾನವರ್ – ಆತಿವಾಹಿಕರಾದ ಸೂರಿಗಳು, ವಾಶಲಿಲ್–ತಮ್ಮ ತಮ್ಮ ಸ್ಥಾನಗಳ ದ್ವಾರಗಳಲ್ಲಿ ನಿಂತು, ಮಾದವನ್ ತಮರೆನ್ಱು – ಇವರು ಶ್ರಿಯಃಪತಿಯ ಭಕ್ತರೆಂದು ಪ್ರೀತಿಯೊಡನೆ, ಪೋದುಮಿನ್ – ಹೀಗೆ ದಯಮಾಡಿರಿ, ಎಮದು ಇಡಮ್ ಪುಕುದುಕ – ನಮ್ಮ ಸ್ಥಾನಗಳೊಳಗೆ ಪ್ರವೇಶಿಸಿರಿ, ಎನ್ಱಲುಮ್–ಎಂದು ಬಹುಮಾನಗಳಿಂದ ಉಪಚರಿಸುತ್ತಲೂ, ವೇದನಲ್ವಾಯವರ್ – ವೇದೋ

